# ಕೊಡಗು ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 2 ಸಂಚಿಕೆ : 9 ಮೇ 1 ರಿಂದ 15-1998 ಪುಟಗಳು : 24 ರೂ. 5



ದಿನಾಂಕ **12-4-1998**ರ ಭಾನುವಾರ ಮೈಸೂರಿನ ಕಲಾ ಮಂದಿರದಲ್ಲಿ ನಡೆದ
ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಪ್ರಥಮ ವಾರ್ಷಿಕೋತ್ಸವ ಸಮಾರಂಭದ ದೃಶ್ಯ

## ವಂದನೆ ಮತ್ತು ಕೋರಿಕೆ

ದಿನಾಂಕ 12–4–98ರ ಭಾನುವಾರ ಮೈಸೂರಿನ ಕಲಾಮಂದಿರದಲ್ಲಿ ನಡೆದ ಅದ್ದೂರಿಯ ಚರಿತ್ರಾರ್ಹ ಪ್ರಥಮ ಅರೆಭಾಷಿಕಾ ಸಾಂಸ್ಕೃತಿಕ ಕಾರ್ಯಕ್ರಮ ಮತ್ತು ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಪ್ರಥಮ ವಾರ್ಷಿಕೋತ್ಸವದಲ್ಲಿ ಭಾಗವಹಿಸಿದ ಸರ್ವ ಗೌಡ ಕಲಾವಿದರಿಗೂ, ಹಿತೈಷಿಗಳಿಗೂ, ಪ್ರಿಯ ಓದುಗರಿಗೂ, ಚಂದಾದಾರರಿಗೂ ಮತ್ತು ಜನಾಂಗದ ಸರ್ವರಿಗೂ ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ ಸಹಕರಿಸಿದವರೆಲ್ಲರಿಗೂ ನಮ್ಮ ಮತ್ತು ಬಳಗದ ಸದಸ್ಯರೆಲ್ಲರ ಹೃತ್ಪೂರ್ವಕ ನಮನಗಳು.

ಅಂತೆಯೇ ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ನೃತ್ಯಿಸಿದ ಹಾಡುಗಳನ್ನು, ಪದ್ಯವನ್ನು, ನಾಟಕವನ್ನು, ರೂಪಕಗಳ ಸಾರಾಂಶವನ್ನು ಕೊಡಗು ಸಂಗಾತಿ ಕಛೇರಿಗೆ ಶೀಘ್ರವಾಗಿ ಕಳುಹಿಸಿದಲ್ಲಿ ಅದನ್ನು ಹಂತ ಹಂತವಾಗಿ ಪ್ರಕಟಿಸುತ್ತೇವೆ.

ವಿಶೇಷ ಸಂಚಿಕೆಯೇ ಏಪ್ರಿಲ್ ತಿಂಗಳ ಸಂಚಿಕೆಗಳೆಂದು ಪ್ರಿಯ ಚಂದದಾರರು ತಿಳಿಯತಕ್ಕದ್ದು.

–ಸಂಪಾದಕಿ

**ತಡಿಯಪ್ಪನ ಕುಮಾರಜಯ,** ಅಧ್ಯಕ್ಷರು, ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು
**ಕುಂಭುಗೌಡನ ಮುತ್ತಮ್ಮ ದೇವಯ್ಯ,** ಕೊಡಗು ಮತ್ತು ದ.ಕ. ಮಹಿಳಾ ಸಂಘಟನೆ ಮೈಸೂರು
**ಪಟ್ಟಡ ಶೀಲಾಮಣಿ,** ಸಂಪಾದಕಿ ಕೊಡಗು ಸಂಗಾತಿ, ಮೈಸೂರು
**ಪಟ್ಟಡ ಪ್ರಭಾಕರ,** ಗೌರವ ಸಂಪಾದಕ ಕೊಡಗು ಸಂಗಾತಿ, ಮೈಸೂರು

---

## ಉಚಿತ ಕೊಡಗು ಸಂಗಾತಿ ಪತ್ರಿಕೆ ಬೇಕೆ ?

ನೀವು ಕೊಡಗು ಸಂಗಾತಿ ಪತ್ರಿಕೆಯ ಸದಸ್ಯತನ ಪಡೆಯಲು ಇಚ್ಛಿಸಿದ್ದೀರಾ ? ಹಾಗಿದ್ದರೆ ಪತ್ರಿಕೆಗೆ ಮೊದಲು 10 ಮಂದಿ ಓದುಗರನ್ನು ಗೊತ್ತುಪಡಿಸಿ. ಅವರಿಂದ ಒಂದು ವರ್ಷದ ಚಂದಾ ರೂ 120/– ರಂತೆ ಒಟ್ಟು ರೂ 1200/–ನ್ನು ಪಡೆದು ಹಣವನ್ನು ಮತ್ತು ಸವಿವರದ ಪಟ್ಟಿಯನ್ನು ಮುಂಗಡವಾಗಿ ಕಳುಹಿಸಿ. ನಿಮಗೆ 1 ವರ್ಷ ಪೂರ್ತಿ ಕೊಡಗು ಸಂಗಾತಿ ಉಚಿತವಾಗಿ ಲಭಿಸುತ್ತದೆ.

ನಿಮ್ಮ ಆಪ್ತರ, ಬಂಧು ಮಿತ್ರರ, ವಿವಾಹದ ಶುಭಕೋರುವ, ಕಣ್ಮರೆಯಾದ ಪ್ರಿಯರ ಜಾಹೀರಾತಿನ ಕನಿಷ್ಠ ದರ.

**ಕಾಲು ಪುಟಕ್ಕೆ - 250/-, ಅರ್ಧ ಪುಟಕ್ಕೆ - 500/-, ಒಂದುಪುಟಕ್ಕೆ – 1000/-**

| | |
|---|---|
| **ಮೊದಲ ರಕ್ಷಾ ಒಳ ಪುಟಕ್ಕೆ** | **1000/–** |
| **ಕೊನೆ ರಕ್ಷಾ ಒಳಪುಟಕ್ಕೆ** | **1000/–** |
| **ಕೊನೆ ಹೊರರಕ್ಷಾ ಪುಟಕ್ಕೆ** | **1500/–** |
| **ಮುಖ ಪುಟಕ್ಕೆ** | **2000/–** |
| **ಜೀವಾವಧಿ ಸದಸ್ಯತನ** (wef **1-4-98** ರಿಂದ) | **2000/-** |

ನಿಮ್ಮ ಬರಹಗಳು ಒಂದು ಪುಟಕ್ಕೆ ಸೀಮಿತವಿರಲಿ, ಅಕ್ಷರಗಳು ಸ್ಪಷ್ಟವಾಗಿರಬೇಕು, ಲೇಖನಗಳ ಕೃತಿ ಚೌರ್ಯವಾಗಿರಕೂಡದು.

ವಿಳಾಸ : **ಸಂಪಾದಕಿ, "ಕೊಡಗು ಸಂಗಾತಿ"** ಪಾಕ್ಷಿಕ ಪತ್ರಿಕೆ
ನಂ. 35, "ಸವಿತಾ ನಿಲಯ", 1ನೇ ಕ್ರಾಸ್,
4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು-12

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**

ಮುದ್ರಕರು :
**ಮಣ್ಣಂಡ್ರ ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**
180/ಎ, 6ನೇ ಮುಖ್ಯ ರಸ್ತೆ,
ವಿನಾಯಕನಗರ, ಮೈಸೂರು-12

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, **"ಸವಿತಾ ನಿಲಯ"**
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, ಮೈಸೂರು–**12.**
ಫೋನ್ **: 516771**

**ಮಡಿಕೇರಿಯ ನಮ್ಮ ವಿಳಾಸ**

**ಕೊಡಗು ಸಂಗಾತಿ**
C/o ನಂಗಾರ್ ಆಡಿಯೋ ವೀಡಿಯೊ
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ–571 201

## ಒಳನೋಟ

ಪುಟಗಳು



## ಅರೆ ಭಾಷಿಕ ವಿಭಾಗ



### ಚಂದಾ ವಿವರ

| | | |
|---|---|---|
| **ಬಿಡಿ ಪ್ರತಿ** | : | **5 ರೂ.** |
| **ಅರ್ಧ ವಾರ್ಷಿಕ** | : | **60 ರೂ.** |
| **ವಾರ್ಷಿಕ ಚಂದಾ** | : | **120 ರೂ.** |

## ಸಂಪಾದಕೀಯ :

ಕೊಡಗು ಸಂಗಾತಿ ಪತ್ರಿಕೆಯ ಒಂದನೇ ವಾರ್ಷಿಕೋತ್ಸವ, ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಮಹಿಳಾ ಸಂಘಟನೆ ಮೈಸೂರು, ಅರೆಭಾಷಿಕ ಸಾಂಸ್ಕೃತಿಕ ಸಮಿತಿ ಮೈಸೂರು, ಈ ಮೂರು ಸಂಸ್ಥೆಗಳು ಸೇರಿ ತಾ|| 12-4-98ರಲ್ಲಿ ಮೈಸೂರಿನ ಕಲಾಮಂದಿರದಲ್ಲಿ ನಡೆಸಿದ ಸಮಾರಂಭ ಸರಳ ಮತ್ತು ಸುಂದರವಾದ ಸಮಾರಂಭವಾಗಿತ್ತು. ಮೈಸೂರಿನಲ್ಲಿ ನೆಲೆಸಿರುವ ಗೌಡರಲ್ಲದೆ ಬೆಂಗಳೂರು, ಕುಶಾಲನಗರ, ಸೋಮವಾರಪೇಟೆ ಚೆಟ್ಟಳ್ಳಿ ಅಭ್ಯತ್‌ಮಂಗಲ, ಕೋಕೇರಿ, ಮರಗೋಡು, ಐಕೊಳ, ಮೂರ್ನಾಡು, ಮದೆನಾಡು, ಪಾಲೂರು, ಕಾಟಕೇರಿ, ಅವಂದೂರು, ಭಾಗಮಂಡಲ, ಮಡಿಕೇರಿ, ಸುಳ್ಯ ಮುಂತಾದ ಸ್ಥಳಗಳಿಂದ ಕಾರ್ಯಕ್ರಮಗಳನ್ನು ವೀಕ್ಷಿಸುವುದಕ್ಕೆ ಹಾಗೂ ಕಾರ್ಯಕ್ರಮಗಳನ್ನು ನಡೆಸಿ ಕೊಡುವುದಕ್ಕೆ ಪುರುಷರು, ಮಹಿಳೆಯರು, ಮಕ್ಕಳು ಆಗಮಿಸಿ ಕಾರ್ಯಕ್ರಮದಲ್ಲಿ ಭಾಗವಹಿಸಿದುದ್ದನ್ನು ನೋಡಿದ ಸಂಗಾತಿಗೆ ಸಂತೋಷವಾಗಿದೆ. ಜನರಲ್ಲಿ ನಮ್ಮ ಸಂಸ್ಕೃತಿಯ ಉಳಿವಿಗಾಗಿ ಹಾಗೂ ಅರೆಭಾಷೆಯ ಅಭಿವೃದ್ಧಿಗಾಗಿ ಚಿಕ್ಕ ಮಕ್ಕಳ ಬಾಯಿಂದ ಈಗಿನ ಯುವ ಪೀಳಿಗೆಗೆ ಜನಾಂಗದ ಸಂಸ್ಕೃತಿ ಹಾಗೂ ಭಾಷೆಯ ಬಗ್ಗೆ ಇರುವ ಕಾಳಜಿಯನ್ನು ಎತ್ತಿತೋರಿಸುತ್ತಿತ್ತು. ಇದು ಈ ಮೂರು ಸಂಸ್ಥೆಗಳು ಕೈಗೊಂಡ ಕಾರ್ಯದ ಸಫಲತೆಯನ್ನು ತೋರಿಸುತ್ತದೆ ಅಲ್ಲದೆ ನಮ್ಮ ಜನರಲ್ಲಿ ಸಂಸ್ಕೃತಿ ಹಾಗೂ ಭಾಷೆಯ ಬಗ್ಗೆ ಅಭಿಮಾನವನ್ನು ಎತ್ತಿತೋರಿಸಿದೆ. ಅಂದಿನ ವಿಶೇಷವೇನೆಂದರೆ ಪ್ರತಿಯೊಬ್ಬ ಕಾರ್ಯಕರ್ತರು ನಮ್ಮ ಹಿಂದಿನ ರೀತಿಯ ಉಡುಗೆ ತೊಡಿಗೆ ಮಾತ್ರವಲ್ಲದೆ ಸಭೆಯ ಕಾರ್ಯಕ್ರಮವನ್ನು ಅರೆಭಾಷೆಯಲ್ಲಿಯೇ ಕೈಕೊಂಡಿದ್ದು ಇದೆಲ್ಲಾ ನಮ್ಮ ಯುವ ಪೀಳಿಗೆಗೆ ನಮ್ಮ ಸಂಸ್ಕೃತಿಯ ಪ್ರದರ್ಶನದ ಮುಖಾಂತರ ನಮ್ಮ ಸಂಸ್ಕೃತಿಯ ಹಾಗೂ ಭಾಷೆಯ ಬಗ್ಗೆ ಹೆಚ್ಚಿನ ಮಾಹಿತಿ ಸಿಗುವಂತಾಯಿತು. ಇದು ಒಂದು ರೀತಿಯಲ್ಲಿ ನಮ್ಮ ಯುವ ಜನರಿಗೆ ತಮ್ಮ ಜೀವನದ ಸಂಸ್ಕೃತಿಯನ್ನು ಅಳವಡಿಸಲು ವೇದಿಕೆ ಒದಗುವ ಸಂದರ್ಭವಾಯಿತು. ದೂರದ ಪಟ್ಟಣಗಳಲ್ಲಿ ವಾಸಿಸುವ ಮತ್ತು ವಿದ್ಯಾಭ್ಯಾಸ ಮಾಡುವ ನಮ್ಮ ಯುವ ಜನಾಂಗಕ್ಕೆ ತಮ್ಮ ಊರಿಗೆ ಹೋಗಿ ಇಂತಹ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಸಾಧ್ಯವಾಗದೇ ಇರಬಹುದು. ನಮ್ಮ ಊರಿನಲ್ಲಿರುವ ಜನರಿಗೂ ಹಲವಾರು ವಿಷಯಗಳು ಗೊತ್ತೇ ಇಲ್ಲದ ಪರಿಸ್ಥಿತಿ ಇಂದು ಇದೆ. ಆದುದರಿಂದ ಈ ರೀತಿಯ ಪ್ರದರ್ಶನಗಳು ಅಂತಹ ಕೊರತೆಯನ್ನು ನೀಗುತ್ತವೆ.

ಆದರೆ ಈ ಸಮಾರಂಭದಲ್ಲಿ ಸಂಗಾತಿ ಗಮನಿಸಿದ ವಿಷಯವೇನೆಂದರೆ ಮೈಸೂರಿನಲ್ಲಿಯೇ ನೆಲೆಸಿರುವ ಗೌಡ ಜನರು ಅಷ್ಟೊಂದು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸದೇ ಇರುವುದು. ಇದಕ್ಕೆ ಕಾರಣವೇನೆಂಬುದನ್ನು ಸಂಗಾತಿ ತಿಳಿಯಲು ಅಪೇಕ್ಷಿಸುತ್ತದೆ. ಸಮಾರಂಭದಲ್ಲಿ ಭಾಗವಹಿಸಿದವರಲ್ಲಿ ಅರ್ಧದಷ್ಟು ಜನರು ನಗರದ ಹೊರಗಿನಿಂದ ಬಂದವರೇ ಆಗಿದ್ದರು. ಮೈಸೂರಿನಲ್ಲಿ ನೆಲೆಸಿರುವ ಗೌಡರಿಗೆ ಮೇಲೆ ಕಾಣಿಸಿದ ಸಂಸ್ಥೆಗಳ ಮೇಲಿನ ತಾತ್ಸಾರವೋ ಅಥವಾ ಗೌಡರ ಸಂಸ್ಕೃತಿ ಮತ್ತು ಭಾಷೆಯ ಮೇಲಿನ ತಾತ್ಸಾರವೋ ಗೊತ್ತಿಲ್ಲ. ಇಂತಹ ಸಮಾರಂಭಗಳಲ್ಲಿ ಈಗಿನ ನವನಾಗರೀಕತೆಯ ಡಿಸ್ಕೊ ಡ್ಯಾನ್ಸ್ ಇಲ್ಲದಿರಬಹುದು. ಅಥವಾ ಕಾರ್ಯಕರ್ತರು ನಟಿಸುವ ಅಥವಾ ಹಾಡುವ ಹಾಡು ಟಿ. ವಿ. ಯಲ್ಲಿ ಅಥವಾ ಸಿನಿಮಾದಲ್ಲಿ ನಟಿಸುವ ಕಲಾಕಾರರ ರೀತಿಯ ಅಥವಾ ಅವುಗಳ ಮಟ್ಟದ ಅಭಿನಯ ಇಲ್ಲದಿರಬಹುದು. ಆದರೆ ಆ ನಟನೆ ಹಾಡುಗಳು ನಮ್ಮ ಜನರಿಂದಲೇ ಆಗುವುದರಿಂದ ಅಂತವುಗಳನ್ನು ಸಿನಿಮಾ ಅಥವಾ ಟಿ. ವಿ. [T.V.]ಯ ಹಾಡುಗಾರಿಕೆಗೆ ನೃತ್ಯ ಮತ್ತು ನಟನೆಗಳಿಗೆ ಹೋಲಿಸುವುದಕ್ಕೆ ಸಾಧ್ಯವಿಲ್ಲ.

ನಮ್ಮ ಯುವಕ-ಯುವತಿಯರಿಗೆ ಸಂಸ್ಕೃತಿ ಮತ್ತು ಭಾಷೆಯ ಪರಿಚಯಕ್ಕೆಂದೇ ಈ ಕಾರ್ಯಕ್ರಮಗಳನ್ನು ಹಮ್ಮಿಕೊಂಡದ್ದಲ್ಲದೆ ಬೇರೆ ಯಾವ ರೀತಿಯ ಲಾಭಕ್ಕಲ್ಲವೆಂಬುದನ್ನು ಸಂಗಾತಿ ದೃಢಪಡಿಸಿದೆ. ಈ ರೀತಿಯ ಸಂಘಟನಾ ಕಾರ್ಯಗಳು ಪ್ರತಿ ಗ್ರಾಮಗಳಲ್ಲೂ ನಡೆದರೆ ನಮ್ಮ ಜನರಲ್ಲಿ ಸಂಸ್ಕೃತಿ ಹಾಗೂ ಭಾಷೆಯ ಅಭಿಮಾನ ಹೆಚ್ಚಾಗುವುದರಲ್ಲಿ ಸಂಶಯವಿಲ್ಲ. ಈ ದಿಶೆಯಲ್ಲಿ ಆಯಾಯ ಪ್ರದೇಶಗಳಲ್ಲಿ ಸೇವಾ ತತ್ಪರತೆ ಇರುವ ಜನರು ಬೇಕು. ಬರೇ ಹೆಸರಿಗಾಗಿ ಅಥವಾ ಅಧಿಕಾರದ ಲಾಭಕ್ಕಾಗಿ ಇಂತಹ ಸಂಘಟನೆಗಳು ಯಾವ ಫಲವನ್ನು ಕೊಡಲಾರವು ಎಂಬುದಾಗಿ ಸಂಗಾತಿ ಭಾವಿಸುತ್ತದೆ.

# ಆದರ್ಶ ಸಮಾಜದ ಹಿತಚಿಂತಕ - ಮಂದ್ರೀರ ನಾಣಯ್ಯ

ಹಣವಂತರಿಗೆ ದಾನ ಮಾಡುವ ಗುಣವಿರುವುದಿಲ್ಲ, ದಾನ ಮಾಡುವ ಗುಣ ಇರುವವರಿಗೆ ಹಣವಿರುವುದಿಲ್ಲ. ಇದಕ್ಕೆ ವಿರುದ್ಧವಾದ ವ್ಯಕ್ತಿಗಳು ಇರುತ್ತಾರೆ. "ನಮ್ಮಂಥ ಇದ್ದವರು ಅಲ್ಪಸ್ವಲ್ಪ ದಾನ ಮಾಡಿದರೆ ಸಮಾಜ ಮುಂದೆ ಬರುವುದರಲ್ಲಿ ಯಾವುದೇ ಅನುಮಾನವಿಲ್ಲ" ಎನ್ನುತ್ತಾರೆ ಮಂದ್ರೀರ ದೇವಯ್ಯ ನಾಣಯ್ಯ.

ಇವರು ಕಗ್ಗೋಡ್ಲು ಗ್ರಾಮದಲ್ಲಿ ಕಾಯಕವನ್ನೇ ದೇವರೆಂದು ತಿಳಿದು ದುಡಿಯುತ್ತಿದ್ದ ದೇವಯ್ಯನವರ ಮಗ. ಕೆಲಸದಲ್ಲಿ ಮಗ್ನರಾಗಿದ್ದಾಗ ಸಂಜೆಯಾದರೆ ಇಷ್ಟು ಬೇಗ ದಿನ ಮುಗಿದು ಹೋಯಿತೆ ಎಂದು ಚಿಂತಿಸಿ ಬೆಳಿಗ್ಗೆಯನ್ನು ಕಾಯುತ್ತಿದ್ದ ಆದರ್ಶ ಪುರುಷರ ಮೂರು ಮಕ್ಕಳಲ್ಲಿ ಒಬ್ಬರು.

ತಮ್ಮ ವಿದ್ಯಾಭ್ಯಾಸ ಮುಗಿದ ಮೇಲೆ ತಂದೆಯ ವೃತ್ತಿ ಕೃಷಿಯನ್ನೇ ಮುಂದುವರೆಸಿಕೊಂಡು ಬಂದರು. ತಂದೆ ಮಾಡಿದ್ದ ಜಮೀನಿನ ಜೊತೆಗೆ ತಾವು ಕೊಂಡ ಜಮೀನಿನಲ್ಲಿ ಕಾಫಿ, ಏಲಕ್ಕಿ, ಭತ್ತವನ್ನು ಬೆಳೆಯುತ್ತಿದ್ದು ಮಾದರಿ ಕೃಷಿಕರಾಗಿದ್ದಾರೆ. ಏಲಕ್ಕಿಯನ್ನು ಹೆಚ್ಚಾಗಿ ಬೆಳೆದು ಸಾಧನೆ ಗೈದ ಕೃಷಿಕರು ಇವರು. ಕಾಫಿಗೆ ಕೃತಕ ನೀರು ಹಾಯಿಸಲು ಮಾಡಿಕೊಂಡ ಕೆರೆಯಲ್ಲಿ ಉಪವೃತ್ತಿಯಾಗಿ ಮೀನು ಕೃಷಿಯನ್ನು ಕೈಗೊಂಡು ಯಶಸ್ವಿಯಾಗಿದ್ದಾರೆ. "ಇದು ಕೂಡ ಲಾಭ ತರುವ ಕೃಷಿ" ಎನ್ನುತ್ತಾರೆ ನಾಣಯ್ಯ.

ಈ ಕೃಷಿಗಳ ಜೊತೆಗೆ ಸಮಾಜದೊಂದಿಗೆ ಸಂಬಂಧ ಇಟ್ಟುಕೊಂಡಿರುವ ಇವರು ಹಲವು ಸಂಘ ಸಂಸ್ಥೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಸಂಘ ಸಂಸ್ಥೆಗಳು ಶಾಖೆಗಳು ಶಾಲೆಗಳು ಇವರ ಹತ್ತಿರ ಸಹಾಯಕ್ಕೆ ಬಂದರೆ ಕಲ್ಪವೃಕ್ಷದಂತೆ ಬರೀ ಕೈಯಿಂದ ಯಾರನ್ನು ಕಳುಹಿಸುವುದಿಲ್ಲ. ಇವರು ಮಾಡಿರುವ ಸಹಾಯ ಇಡೀ ಜಿಲ್ಲೆಗೆ ಹಬ್ಬಿದೆ. ಇದನ್ನು ಪಟ್ಟಿ ಮಾಡುತ್ತಾ ಹೋದರೆ ದೊಡ್ಡ ಪಟ್ಟಿಯೇ ಆಗುತ್ತದೆ. ಮೇಕೇರಿಯ ಗೌರಿ-ಗಣೇಶ ದೇವಸ್ಥಾನಕ್ಕೆ, ಮದೆ ಪದವಿಪೂರ್ವ ಕಾಲೇಜಿಗೆ, ಮಡಿಕೇರಿಯ ಗೌಡ ಸಮಾಜಕ್ಕೆ, ಬೆಂಗಳೂರಿನ ಗೌಡ ಸಮಾಜಕ್ಕೆ, ಭಾಗಮಂಡಲ ಗೌಡ ಸಮಾಜಕ್ಕೆ ಒಮ್ಮೆ ಮೇಕೇರಿಯ ಮಾಸ್ಟರೊಬ್ಬರು ಬಂದು ಮಕ್ಕಳಿಗೆ ಕೊಠಡಿಯ ಕೊರತೆಯನ್ನು ಹೇಳಿಕೊಂಡರಂತೆ ಆದರಂತೆ



ಮಂದ್ರೀರ ನಾಣಯ್ಯ

ಅಲ್ಲಿಗೆ ಒಂದು ಕೊಠಡಿಯನ್ನು ಕಟ್ಟಿಸಿಕೊಟ್ಟಿದ್ದಾರೆ. ಮಡಿಕೇರಿಯ ವಿದ್ಯಾಸಂಘಕ್ಕೆ ಬೋರ್‌ವೆಲ್ ಹಾಕಿಸಲು ಸಹಾಯ ಮಾಡಿದ್ದಾರೆ. ಮರಗೋಡು ಹೈಸ್ಕೂಲ್ ಮತ್ತು ದೇವಸ್ಥಾನಕ್ಕೆ ಉದಾರವಾದ ಸಹಾಯ ಮಾಡಿದ್ದಾರೆ. ಇನ್ನು ಮುಂದೆಯೂ ಮರಗೋಡು ಗೌಡ ಸಮಾಜಕ್ಕೆ ಸಹಾಯ ಮಾಡುವ ಇರಾದೆಯನ್ನು ಹೊಂದಿದ್ದಾರೆ. ಇದು ಹೀಗೆ ಬರೆಯುತ್ತಾ ಹೋದರೆ ಮುಗಿಯುವುದಿಲ್ಲ.

ಹಾಕತ್ತೂರಿನ ಶಾಲೆಯಲ್ಲಿ ನಿಧಿ ಸ್ಥಾಪಿಸಿ ಅದರಿಂದ ಬರುವ ಆದಾಯದಿಂದ ಪ್ರತಿವರ್ಷ ಉತ್ತಮ ವಿದ್ಯಾರ್ಥಿಗಳಿಗೆ ಬಹುಮಾನ ಕೊಟ್ಟು ಪ್ರೋತ್ಸಾಹ ನೀಡುವುದರ ಮೂಲಕ ನಮ್ಮ ಸಮಾಜಕ್ಕೆ ಉತ್ತಮ ವ್ಯಕ್ತಿಗಳನ್ನು ರೂಪಿಸಲು ಹೊರಟಿದ್ದಾರೆ.

ನಾನು ಸಮಾಜದಲ್ಲಿ ಹುಟ್ಟಿ ಸಮಾಜಕ್ಕೆ ಸಹಾಯ ಮಾಡಿದ್ದೇನೆ ಎಂದು ತಮ್ಮ ಉದಾರತನವನ್ನು ಮೆರೆದಿದ್ದಾರೆ. ನಾನು ಕಷ್ಟದಿಂದ ಬೆಳೆದು ಬಂದವನು, ಕಷ್ಟ ಎಂದರೆ ನನಗೆ ಅರಿವಿದೆ. ಇತರರು ಇದನ್ನು ಅನುಸರಿಸಬೇಕು. ಮಾನವ ಮಾನವನಿಗಾಗಿ ಇಷ್ಟು ಮಾಡದಿದ್ದರೆ ಏನು ಪ್ರಯೋಜನ ಎನ್ನುತ್ತಾರೆ.

ತಮ್ಮ ತಂದೆಯ ಬಗ್ಗೆ ಅಪಾರವಾದ ಗೌರವ ಇರುವ ಇವರು ಅನುದಿನವು ನೆನೆಯುತ್ತಾರೆ. ಸಮಾಜದಲ್ಲಿ "ದೇವಯ್ಯ" ಒಬ್ಬ ಆದರ್ಶ ವ್ಯಕ್ತಿ. ಯಾವ ಪ್ರಾಂತ್ಯನಲ್ಲಿಯೂ ಇಂತವರು ಸಿಗುವುದಿಲ್ಲವೆನ್ನುತ್ತಾ ಹೆಮ್ಮೆ ಪಡುತ್ತಾರೆ.

ಇವರ ಶ್ರೀಮತಿ ಚಂದ್ರಾವತಿ ಅವರು ಕೂಡ ತಮ್ಮ ಎಲ್ಲಾ ಕಾರ್ಯಗಳಿಗೂ ಪ್ರೋತ್ಸಾಹ ಕೊಡುತ್ತಾರೆ. ಶ್ರೀಮತಿಯವರು ಐದು ಹೆಣ್ಣು ಮಕ್ಕಳು ಏಕ ಮಾತ್ರ ಪುತ್ರನನ್ನು ಪಡೆದು ಸುಖ ಜೀವನ ನಡೆಸುತ್ತಿದ್ದಾರೆ.

ಕೊಡಗು ಸಂಗಾತಿಯು ಇವರ ದಾನ ಧರ್ಮಗಳು ಇನ್ನು ಹೆಚ್ಚು ನಮ್ಮ ಸಮಾಜಕ್ಕೆ ಲಭಿಸಲೆಂದು ಆಶಿಸಿ ಮಂದ್ರೀರ ನಾಣಯ್ಯ ಅವರಿಗೆ ತುಂಬು ಹೃದಯದಿಂದ ಶುಭ ಕೋರುತ್ತದೆ.

○ ಪಟ್ಟಡ ಪ್ರಭಾಕರ್

---

### ಸೂಕ್ತಿ

- ○ ಆಜ್ಞೆಯನ್ನು ಪಾಲಿಸುವವನು ಆತ್ಮವನ್ನು ಪಾಲಿಸುವನು.
- ○ ದೇವರ ಭಯವೇ ಜ್ಞಾನದ ಆರಂಭ.

# ನಾಕಂಡಂತೆ ಮೈಸೂರಿನಲ್ಲಿ ಕೊಡಗಿನ ಅರೆಭಾಷೆ ಗೌಡರು

**ಪ್ರ**ತಿಯೊಬ್ಬ ಮನುಷ್ಯನಿಗೆ ಅವನವನ ಜಾತಿ, ಧರ್ಮ, ಭಾಷೆ ಎಂಬ ಅಭಿಮಾನ ಇದ್ದೇ ಇರುತ್ತದೆ. ಆದರೆ ನಮ್ಮ ಅರೆಭಾಷೆ ಗೌಡರಿಗೆ ಮಾತ್ರ[ಕೆಲವರಿಗೆ]ಈ ಅಭಿಮಾನ ಕಡಿಮೆ. ಪರ ಭಾಷೆಗೆ ಒತ್ತು ಕೊಟ್ಟು, ಮಾತೃಭಾಷೆಯನ್ನು ಮರೆಯುವುದರಲ್ಲಿ ಮತ್ತು ತಿರಸ್ಕಾರ ಮಾಡುವುದರಲ್ಲಿ ನಮ್ಮ ಗೌಡರು ಅಗ್ರಗಣ್ಯರೆಂದು ನನ್ನ ಭಾವನೆ. ಈ ರೀತಿ ಮುಂದುವರಿಯುತ್ತಾ ಹೋದರೆ ನಮ್ಮ ಅರೆಭಾಷೆ ಇನ್ನು ಕೆಲವೇ ವರ್ಷಗಳಲ್ಲಿ ನಾಶವಾಗಬಹುದು.

ನಮ್ಮ ಅರೆಭಾಷೆಗೌಡರಿಗೆ ಕೊಡವ, ಮಲೆಯಾಳಿ, ತುಳು, ತಮಿಳು, ತೆಲುಗು, ಕನ್ನಡ, ಇಂಗ್ಲೀಷ್, ಹಾಗೂ ಹಿಂದಿ ಭಾಷೆ ಬರುತ್ತದೆ. ಆದರೆ ಅರೆಭಾಷೆ ಬರುವುದಿಲ್ಲವೆಂದರೆ ನಾಚಿಕೆಗೇಡಿನ ಸಂಗತಿ, ಬಂದರೂ ಮಾತನಾಡದೇ ಇರುವುದು ಅವರ ಸಣ್ಣತನದ ಕೀಳರಿಮೆಯ ಪರಮಾವಧಿಯೆನ್ನಬಹುದು.

ಒಂದು ತಿಂಗಳಿಗೂ ಹೆಚ್ಚಿನ ದಿನ ನಾನು ಹಾಗೂ ನಮ್ಮ ಸಮಿತಿಯವರು ಹೆಚ್ಚು ಕಡಿಮೆ 95% ಮನೆಗೆ ಭೇಟಿ ಕೊಟ್ಟು ನಮ್ಮ ಕಾರ್ಯಕ್ರಮದ ಬಗ್ಗೆ ವಿವರಣೆ ಕೊಟ್ಟೆವು. ಹೋದ ಮನೆಯಲ್ಲಿ ನಮಗೆ ಕಾಫಿ ತಿಂಡಿಗೆ ಯಾರು ಕೊರತೆ ಮಾಡಿಲ್ಲ. ಕಾಫಿ, ತಿಂಡಿ ವಿಷಯದಲ್ಲಿ ನಮ್ಮವರನ್ನು ಪ್ರಶಂಶಿಸಬೇಕು. ಆದರೆ ಹಣಕಾಸಿನ ವಿಷಯ ಮತ್ತು ಅರೆಭಾಷೆ ಕಾರ್ಯಕ್ರಮವನ್ನು ಕೇಳಿದಾಗ ಸತ್ಕಾರದಲ್ಲಿ ಉದಾರತೆ ತೋರಿದರೂ ಈ ವಿಷಯದಲ್ಲಿ ಮಾತ್ರ ತಮ್ಮ ಕಷ್ಟಗಳನ್ನು ಮುಂದಿಡುತ್ತಿದ್ದರು. ಇದು ಸತ್ಯವೂ ಹೌದು. ಕೇವಲ ಒಬ್ಬನ ಸಂಬಳದಲ್ಲಿ ಇಡೀ ಸಂಸಾರವನ್ನು ನಡೆಸಬೇಕಾದರೆ ಒಂದು ಕಷ್ಟ ಅವರಿಗೆ ಗೊತ್ತು. ಆದರೆ ಅದನ್ನು ಬಿಡಿಸಿ ಹೇಳದಿದ್ದರೂ ನಮಗೂ ಅದರ ಅಗತ್ಯವೂ ಇರಲಿಲ್ಲ. ಆದರೂ ನಮಗೆ ಕೈಲಾದ ಸಹಾಯ ಮಾಡಿದ್ದಾರೆ.

ಈ ನಮ್ಮ ಕಾರ್ಯಕ್ರಮವನ್ನು ಪ್ರತಿಯೊಬ್ಬರು ಇಷ್ಟ ಪಡುತ್ತಿದ್ದರು ಹಾಗೂ ಮಾರ್ಗದರ್ಶನ ನೀಡುತ್ತಿದ್ದರು. ಕೆಲವರಿಗೆ ನಮ್ಮ ಸಂಸ್ಕೃತಿಯ ಬಗ್ಗೆ ಎಲ್ಲಿಲ್ಲದ ಅಭಿಮಾನ. ಇನ್ನೂ ಕೆಲವರಿಗೆ ಬೇಕೊ, ಬೇಡ ಎಂಬಂತೆ ಪ್ರತಿಕ್ರಿಯಿಸುತ್ತಿದ್ದರು. ಆದರೆ ಮಧ್ಯಮವರ್ಗದ ಹೆಚ್ಚಿನ ಜನರು ಶ್ರೀಮಂತ ಗೌಡ ಜನಾಂಗದ ಮೇಲೆ ತಮ್ಮ ಕೋಪ ವ್ಯಕ್ತಪಡಿಸುತ್ತಿದ್ದುದು ಕಂಡುಬರುತ್ತಿತ್ತು. ನಮ್ಮ ಮೇಲೆಯೂ ಕೆಲವರ ವಾಕ್ ಪ್ರಹಾರವಾದರೂ, ಮಾತುಕತೆಯ ನಂತರ ವಿಷಯವನ್ನು ತಿಳಿಗೊಳಿಸಿಕೊಂಡೆವು.

ನಮಗೆ ಕೆಲವರ ಕಠಿಣ ಪ್ರತಿರೋಧ ಎದುರಾಯಿತು. ಕೆಲವರು ನಮ್ಮ ಕಾರ್ಯಕ್ರಮದ ಬಗ್ಗೆ ಆನೆ ಲದ್ದಿ ಹಾಕಿದೆ ಎಂದು ಮೊಲವು ಲದ್ದಿ ಹಾಕಲು ಹೋದಹಾಗೆ, ಮದುವೆಗೆ ಪಕ್ಕದ ಮನೆಯ ಸೀರೆ, ಚಿನ್ನವನ್ನು [ಬಾಡಿಗೆಗೆ] ಹಾಕಿಕೊಂಡು ಹೋದ ಹಾಗೆ ಎಂದು ಬಣ್ಣಿಸಿದ್ದಾರೆ. ಕೆಲವರು ಕಂಬಳಿಯಿದ್ದಷ್ಟು ಕಾಲು ಚಾಚಬೇಕೆಂದರೆ, ಬೇರೆಯವರು ಮಾಡಿದರು ಎಂದು ನಾವೇಕೆ ಮಾಡಬೇಕು, ಗಣಪತಿ ಕೂರಿಸಲು ದೇವಸ್ಥಾನ ಸ್ಥಾಪಿಸಲು, ಸಂಘ–ಸಂಸ್ಥೆ ಕಟ್ಟುತ್ತೇವೆಂದು ಹಣ ಕೇಳುವುದೇ ಒಂದು ಕೆಲಸವಾಗಿದೆ ಎಂದೂ ಪ್ರತಿಕ್ರಿಯೆ ನೀಡಿದ್ದಾರೆ. ಇನ್ನೊಬ್ಬರು ನನಗೆ ಗೌಡ ಜನಾಂಗವೇ ಬೇಡ, ನಮ್ಮ ಗೌಡ ಜನಾಂಗ ನಾನು ಕಷ್ಟದಲ್ಲಿ ಇದ್ದಾಗ ಯಾರು ನೋಡಲಿಲ್ಲ, ನನಗೆ ಮೈಸೂರಿನವರೇ [ಸ್ಥಳೀಯರು] ಸಹಾಯ ಮಾಡಿರುವುದು ಎಂದು ಜನಾಂಗವನ್ನೇ ಜರೆದಿದ್ದಾರೆ ನಂತರ ಕೆಲವರು ಇಂತಹ ಸಂಸ್ಥೆಗಳು ನಾಯಿ ಕೊಡೆಯಂತೆ ಪ್ರತಿದಿನ ಹುಟ್ಟಿಕೊಳ್ಳುತ್ತವೆ. ಇವಕ್ಕೆ ಸಹಾಯ ಮಾಡುವುದೇ ನಮ್ಮ ಕೆಲಸವಲ್ಲ, ಸಮಾಜ ಸೇವೆ ನಾವು ಮನೆಯಲ್ಲಿಯೇ ಮಾಡಬಹುದು, ಸಮಾಜದಲ್ಲಿಯೇ ಬಂದು ಮಾಡಬೇಕೆಂದೇನಿಲ್ಲ. ಅಲ್ಲದೇ ಗೌಡ ಸಮಾಜವನ್ನು ನೀವು ಒಡೆಯಲು ಹೊರಟಿದ್ದೀರಿ ಎಂಬ ಮಾತುಗಳಿಗೂ ಕಿವಿ ಕೊಡಬೇಕಾಗಿ ಬಂತು. ಇನ್ನೊಂದು ಕಡೆ ವೈಜ್ಞಾನಿಕ ಯುಗದಲ್ಲಿ ನಮ್ಮ ಸಂಸ್ಕೃತಿ ಬೇಕೆ (ಉಡಿಗೆ ತೊಡಿಗೆ) ಎಂಬ ಪ್ರಶ್ನೆಯು ಎದುರಾಯಿತು. ಇದಕ್ಕೆಲ್ಲಾ ಸಮಜಾಯಿಷಿ ಉತ್ತರ ಕೊಟ್ಟು ಮುಂದೆ ಹೋಗುತ್ತಿದ್ದರೆ ಇನ್ನೂ ಹತ್ತಾರು ಪ್ರಶ್ನೆಗಳು. ಮೈಸೂರಿನ ಗೌಡ ಸಮಾಜದ ಬಗ್ಗೆ ಆಕ್ರೋಶ ವ್ಯಕ್ತಪಡಿಸಿದವರು ಶೇ 90 ಜನರು. ಸಮಾಜಕ್ಕೆ ಕೈಲ್ ಮುಹೂರ್ತ ಹಬ್ಬಕ್ಕೆ ಬಂದರೆ ನಮ್ಮನ್ನು ಯಾರು ಮಾತನಾಡಿಸುವವರೆ ಇಲ್ಲ ಎಂದು ಕಾರ್ಯಕಾರಿ ಮಂಡಳಿಯವರ ಮೇಲೆ ಆಕ್ರೋಶವನ್ನು ವ್ಯಕ್ತಪಡಿಸಿದರೆ, ಇನ್ನೂ ಕೆಲವರು ನೀವು ಗೌಡಸಮಾಜದ ಕಡೆಯಿಂದ ಬಂದಿದ್ದೀರಿ, ನಿಮಗೆ ಒಂದು ಪೈಸೆ ಕೊಡೋದಿಲ್ಲಎಂಬ ಮಾತು ಕೊನೆಗೆ ನಾವು ಸಮಾಜದ ಕಡೆಯಿಂದ ಬಂದಿಲ್ಲ ನಮ್ಮ ಕಾರ್ಯಕ್ರಮವಿದು ಎಂದು ತಿಳಿಸಿದಾಗ ತುಂಬು ಹೃದಯದಿಂದ ಧನ ಸಹಾಯ ಮಾಡಿದ್ದಾರೆ.

ಇನ್ನೊಬ್ಬ ಪ್ರಮುಖರ ಅಭಿಪ್ರಾಯದಂತೆ ಗೌಡ ಸಮಾಜ ಇರುವಾಗ ಪ್ರತ್ಯೇಕವಾದ ಇನ್ನೊಂದು ಸಮಿತಿಯ ಅವಶ್ಯಕತೆ ಇತ್ತೇ? ಎಂಬ ಬಗ್ಗೆ. ಈ ವ್ಯಕ್ತಿ ನಮ್ಮ ಸಂಸ್ಕೃತಿಯ ಕಟ್ಟಾ ಅಭಿಮಾನಿ. ಅಪ್ಪಟ ಗೌಡ ಸಂಸ್ಕೃತಿಯುಳ್ಳ ಮಾತು. ನಮ್ಮ ಕಾರ್ಯಕ್ರಮವನ್ನು ಮುಂದಿಟ್ಟೆವು. ಕೊನೆಗೆ ಧನ ಸಹಾಯ ಮಾಡಿದ್ದಲ್ಲದೆ ನಮ್ಮನ್ನು ವರ್ಷಾಂತರದಿಂದ ಕಾಣದಿದ್ದ ಸಂಬಂಧಿಗಳು ಮನೆಗೆ ಬಂದು ಹೋಗು

9ನೇ ಪುಟ ನೋಡಿ

# ಗೌಡಕೇಸರಿ ದಿ|| ನಿಡ್ಯಮಲೆ ಮುದ್ದಪ್ಪನವರ ಜೀವನ ಚರಿತ್ರೆ

ಪ್ರೊ. ಕೆ. ಕುಶಾಲಪ್ಪಗೌಡ

ಭಾಗ – ೨

[ಹಿಂದಿನ ಸಂಚಿಕೆಯಿಂದ]

**ಕೆ**ಲವು ಸಲ ನಾವೂ ನಿಂತು ಆಲಿಸುವುದಿತ್ತು. ಆಗ ಮುದ್ದಪ್ಪನವರು ಮತ್ತು ಸುಬ್ಬಯ್ಯನವರು ಇಬ್ಬರೇ ಸಿನೆಮಾ ಮಂದಿರಕ್ಕೆ ಹೋದರು. ತಾವೇ ಟಿಕೇಟು ಪಡಕೊಂಡರು. ಮತ್ತೆ ಈಚೆಗಿದ್ದ ಗೂಡಂಗಡಿಗೆ ಬಂದರು. ಅಲ್ಲಿ ಏನನ್ನೋ (ಬಹುಶಃ ಪೆಪ್ಪರ್‌ಮಿಂಟು ಅಥವಾ ಕಡಲೆ ಇರಬಹುದು. ಯಾಕೆಂದರೆ ಅವರು ಇಬ್ಬರು ಸಿಗರೇಟು ಸೇದುತ್ತಿರಲಿಲ್ಲ) ಕೊಂಡುಕೊಂಡರು. ಇವನ್ನೆಲ್ಲ ರಸ್ತೆಯ ಮೇಲಿದ್ದ ಜನರು ದೂರದಿಂದ ನೋಡುತ್ತಿದ್ದರು. ಏನೋ ನಗುತ್ತ ಮಾತಾಡಿಕೊಳ್ಳುತ್ತಿದ್ದರು -ಈ ಹಳೆ ಜೋಡಿಯ ಮೋಜನ್ನು ನೋಡಿ. ಮತ್ತೆ.ಅವರಿಬ್ಬರೂ ಮಾತಾಡಿಕೊಳ್ಳುತ್ತಾ ಸಿನೆಮಾ ಮಂದಿರದೊಳಕ್ಕೆ ನಡೆದರು. ಅವರಿಬ್ಬರೇ ಆದಾಗ, 'ನೀನು' 'ತಾನು' ಎಂದು ಏಕವಚನದಲ್ಲೇ ಮಾತಾಡಿಕೊಳ್ಳುತ್ತಿದ್ದರೆಂದು ಕೇಳಿದ್ದೇನೆ. ಇದು ನನಗೆ ತುಂಬಾ ಆಪ್ಯಾಯಮಾನವಾಗಿ ಕಾಣುತ್ತದೆ. ತಮ್ಮ ದೈನಂದಿನ ಜಂಜಾಟಗಳನ್ನೂ, ಸಾಂಸಾರಿಕ ಬಂಧಗಳನ್ನೂ ಮರೆತು, ಬಹುಕಾಲದ ಸ್ನೇಹಿತರಾದ ತಾವಿಬ್ಬರೇ ಈ ಒಂದು ಸುಂದರ ಸಂಜೆಯನ್ನು ಬಾಲ್ಯಕಾಲದಂತೆ ಒಟ್ಟಿಗೆ ಕಳೆಯಲು ಹೊರಟ ಈ ನೋಟ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಇದೆ. ಅದನ್ನು ನೆನೆದಾಗ ಶುದ್ಧ ಸ್ನೇಹದ ಹಿರಿಮೆಯನ್ನು ಕಂಡು ಪುಳಕಿತನಾಗುತ್ತೇನೆ.

ಅವರ ಮಗನ ಮದುವೆ ಅವರ ಮಾವನ ಮನೆಯಾದ ಐವರ್ನಾಡಿನ ಮಡ್ತಿಲ ಮನೆಯಲ್ಲಿ ನಡೆಯುವುದಕ್ಕೆ ಆಮಂತ್ರಣ ಬಂದಿತ್ತು. ಹತ್ತು ಹದಿನೈದು ಮೈಲು ದೂರದ ಅಲ್ಲಿಗೆ ಹೊರಟ ನಮ್ಮೂರಿನ ಹಿರಿಯರೊಡನೆ ನಾನೂ ಹೋಗಿದ್ದೆ. ಆಗ ಅಷ್ಟು ದೂರವನ್ನು ನಡೆದುಕೊಂಡೇ ಹೋಗಬೇಕಾಗಿತ್ತು. ಒಮ್ಮೆ ಸುಳ್ಯದ ಹೈಸ್ಕೂಲಿನ ವಾರ್ಷಿಕೋತ್ಸವದ ಭಾಷಣಕ್ಕೆ ಬಂದಿದ್ದರು ನಾನೂ ಸುಳ್ಯಕ್ಕೆ ಹೋಗಿದ್ದೆ. ಅವರು ಸುಬ್ಬಯ್ಯ ಪ್ರಭುಗಳೊಡನೆ ಅವರ ಅಂಗಡಿಯೆದುರು ಕಾರು ನಿಲ್ಲಿಸಿ ಮಾತಾಡುತ್ತಿದ್ದರು. ದೊಡ್ಡವರ ಮಾತಿನ ಮಧ್ಯ ಪ್ರವೇಶಿಸಬಾರದೆಂದು ಬದಿಗೆ ನಿಂತು ಮತ್ತೆ ಎಡೆಗೊಂಡು ನಮಸ್ಕರಿಸಿದೆ. ಆ ಮೇಲೆ ನನ್ನನ್ನೂ ಕಾರಲ್ಲಿ ಕುಳಿತುಕೊಳ್ಳುವಂತೆ ಹೇಳಿ ಸಭಾಂಗಣಕ್ಕೆ ಕರೆದೊಯ್ದರು.

1952ರಲ್ಲಿ ನಾನು ಮದ್ರಾಸಿಗೆ ಕನ್ನಡ ಎಂ.ಎ. ಕಲಿಯಲು ಹೋದೆ.ದೊಡ್ಡ ರಜೆಯಲ್ಲಿ ಊರಿಗೆ ಬಂದಾಗ ಒಮ್ಮೆ ಮಡಿಕೇರಿಗೆ ಹೋಗಬೇಕು_ಅವರನ್ನು ನೋಡಬೇಕೆಂದು ಆಶಿಸಿದ್ದೆ.1953ರ ಏಪ್ರಿಲ್ ತಿಂಗಳ ಮೊದಲ ವಾರವೇನೋ ಇರಬೇಕು. ಅವರು ತೀರಿಕೊಂಡ ದುಃಖವಾರ್ತೆ ತಿಳಿಯಿತು. ನನ್ನ ಆಸೆ ಈಡೇರಲಿಲ್ಲ ಎಂಬ ವ್ಯಥೆ ನನ್ನದಾಗಿ ಉಳಿಯಿತು.

ಪೆರಾಜೆ ಗ್ರಾಮದ ದೇವಸ್ಥಾನದ ಜೀರ್ಣೋದ್ಧಾರ, ಶಾಲೆ, ಮುಂತಾಗಿ ಗ್ರಾಮಾಭಿವೃದ್ಧಿ ಆಗಬೇಕೆಂದು ಅವರು ಎಷ್ಟು ಸಾಧ್ಯವೋ ಅಷ್ಟು ಪ್ರೋತ್ಸಾಹ ಕೊಡುತ್ತಿದ್ದರು. ಗ್ರಾಮದ ಎಲ್ಲರಿಗೂ ರಕ್ಷಾಕವಚದಂತಿದ್ದರು. ಅಧಿಕಾರಿಗಳ ಕಿರುಕುಳ ಮುಂತಾದವುಗಳ ಸುಳಿವಿರಲಿಲ್ಲ.ದೂರದಲ್ಲಿದ್ದರೂ ಪ್ರಕಾಶ ಬೀರುವ ಸೂರ್ಯನಂತೆ ಅವರು ನಮ್ಮ ಗ್ರಾಮಕ್ಕಿದ್ದರು. ಅದಕ್ಕೊಂದಕ್ಕೆ ಅಲ್ಲ, ನಮ್ಮ ಕೊಡಗು ಮತ್ತು ದಕ್ಷಿಣ ಕನ್ನಡದ ಎಲ್ಲ ಸಮಾಜ ಬಾಂಧವರಿಗೂ ಅವರೊಬ್ಬ ಸೂರ್ಯನೇ ಆಗಿದ್ದರು. ಬೆಳೆಯುವ ಯುವ ಚೇತನಗಳೆದೆಯಲ್ಲಿ ಸ್ಥಾಯಿಯಾದ ಸ್ಫೂರ್ತಿಯ ನೆಲೆಯಾಗಿದ್ದರು. ಅಂತಹ ಸೂರ್ಯ ನಡು ಹಗಲಲ್ಲಿ ಅಸ್ತಂಗತನಾಗಿ ಕತ್ತಲು ಕವಿದಂತಾದರೂ, ಗ್ರಾಮ ಈಗ ಎಚ್ಚೆತ್ತುಕೊಂಡಿದೆ,ಮುಂದುವರಿದಿದೆ. ವಿದ್ಯಾವಂತರು, ಉದ್ಯೋಗಸ್ಥರು ಹೆಚ್ಚಿದ್ದಾರೆ. ದೂರ ದೂರದ ಊರುಗಳಲ್ಲಿ ನೆಲೆಸಿದ್ದಾರೆ. ಗ್ರಾಮದಲ್ಲಿ ಅಡಿಕೆ ತೋಟ ಹೆಚ್ಚಿ ಶ್ರೀಮಂತಿಕೆಯೂ ಹೆಚ್ಚಿನ ಭೂಮಾಲಿಕರಿಗಿದೆ.

ಇಷ್ಟೆಲ್ಲ ಇದ್ದರೂ, ಖೇದದ ಸಂಗತಿಯೆಂದರೆ, ಮಾರ್ಗ - ವಾಹನ ಸಂಚಾರಗಳಿಲ್ಲದ ಕಾಲದಲ್ಲಿ ಯಾವ ಮುದ್ದಪ್ಪನವರು, ಉನ್ನತ ಹುದ್ದೆಯಲ್ಲಿದ್ದವರೂ, ಕಾಲ್ನಡಿಗೆಯಲ್ಲೇ ಹೋಗಿ ಬಂದು ತಮ್ಮ ಆಸ್ತಿಪಾಸ್ತಿಯ ಉಸ್ತುವಾರಿಯನ್ನು ಅಕ್ಕರೆಯಿಂದ ನೋಡಿಕೊಳ್ಳುತ್ತಿದ್ದರೋ, ಅಂತಹ ಅವರ ಆಸ್ತಿ ಇಂದು ಅವರ ಪೀಳಿಗೆಯಲ್ಲಿ ಉಳಿದಿಲ್ಲ ಎಂಬುದು. ಮುದ್ದಪ್ಪನವರು ತಮ್ಮ ಮಧ್ಯವಯಸ್ಸಿನಲ್ಲಿ ತಮ್ಮ ಪತ್ನಿಯನ್ನು ಕಳಕೊಂಡಿದ್ದರು. ಹಿರಿಯ ಮಗ ಅವರ ಮಾವನ ಮನೆಯ ಆಸ್ತಿಯ ವಾರಸುದಾರರಾಗಿ ಐವರ್ನಾಡಿನಲ್ಲಿ ನೆಲೆಸಿದ್ರೂ, ಬೇಗನೆ ತೀರಿಕೊಂಡರು. ಎರಡನೆಯ ಮಗನೂ ಎಳೆಯ ವಯಸ್ಸಿನಲ್ಲೇ ತೀರಿಕೊಂಡರು. ಹೆಣ್ಣು ಮಕ್ಕಳು, ಮದುವೆ, ಉದ್ಯೋಗವೆಂದು ಬೇರೆ ಬೇರೆ ಕಡೆ ಚದುರಿ ಹೋದರು. ಪೆರಾಜೆ ಗ್ರಾಮದ ಅವರ ಆಸ್ತಿಯನ್ನು ಬೇರೆಯವರು ಕೊಂಡುಕೊಂಡರು. ಹೀಗಾಗಿ ಅವರ ಪೀಳಿಗೆಗೆ ಪೆರಾಜೆಯ ಸಂಪರ್ಕ ಕಡಿದು ಹೋಯ್ತು. ಇದೊಂದು ದುರಂತವೆನ್ನಬೇಕು. ಆದರೆ ಅವರ ಅಣ್ಣಂದಿರ ವಂಶಸ್ಥರು ಮಾತ್ರ ನಿಡ್ಯಮಲೆಯಲ್ಲಿ ಇದ್ದಾರೆ. ಅದೇ ಹಂಚಿನ ಕುಟುಂಬದ ಮನೆ ಇಂದಿಗೂ ನಿಂತಿದೆ.

(ಮುಂದುವರಿಯುವುದು)

## ಬಾನ ಜಾದೂಗಾರ

ದಿನದ ಬದುಕು ಮುಗಿಯುತಲಿ
ದಿನವೆಲ್ಲ ದುಡಿದ ರವಿ ಬಳಲಿ
ಹೇಮಗಿರಿಗಳೆಡೆ ವಿಶ್ರಮಿಸುತ್ತಿರೆ
ಹಿಂದೆಯೇ ಬೆಳ್ಳಿಮೋಡದ
ತೆಳುಗೆರೆಯೊಂದನ್ನೆ ಗೀಚಿದನಲ್ಲ
ಇವನಾವ ಕಲಾಕಾರ ? !

ಮತ್ತೆರಡು ಕ್ಷಣಗಳಲ್ಲಿ
ಕರಿಮೋಡಗಳಿಗೆಲ್ಲ ಹೊಂಬಣ್ಣದ
ಚೆಲುವ ಕಿರೀಟ ತೊಡಿಸಿ
ಮಳೆಯುದ್ಧಕ್ಕೆ ಅಣಿಗೊಳಿಸಿದನಲ್ಲ
ಇವನಾವ ಮಂತ್ರಗಾರ ? !

ಕಣ್ಮುಚ್ಚಿ ತೆರೆವುದರೊಳಗೆ
ಬಾನ ತುಂಬ ಕೆಂಬಣ್ಣದ
ರತ್ನಗಂಬಳಿ ಹರಡಿ
ನಮ್ಮ-ನಿಮ್ಮನೆಲ್ಲ ಕರೆದನಲ್ಲ
ಇವನೆಂಥ ಮೋಡಿಗಾರ ? !

ತಾರೆಗಳ ಜತೆ ಸೇರಿ
ಶಶಿ ಬರುವನೆಂದು ಮಳೆ ಬಿಲ್ಲಿನ
ಕಮಾನು ಕಟ್ಟಿ
ಶೃಂಗರಿಸಿದನಲ್ಲ
ಇವನೆಂಥ ಚೆಲುವುಗಾರ ? !

ರಾತ್ರಿಯಾಗುತಲೆ ಒಡನೆ
ಆಗಸದ ಕನ್ನಡಿಯಲ್ಲಿ
ನೆಲಮಲ್ಲಿಗೆಯ ಬಿಂಬಗಳ
ಚಂದಿರನ ಸುತ್ತ ಮೂಡಿಸಿದನಲ್ಲ
ಇವನಾವ ಚಿತ್ರಕಾರ ? !

ಮತ್ತೆ ಚುಕ್ಕಿ ಚಂದ್ರಮರ ನಡುವೆ
ಕರಿಮುಗಿಲ ತಂದು
ಮರೆಮಾಡಿ, ಬೆಳಗುತ್ತ
ಕಣ್ಣುಮುಚ್ಚಾಲೆಯಾಡಿಸಿದನಲ್ಲ
ಇವನಾವ ಮಾಯಾಕಾರ ? !

ಮತ್ತೆ ಮುಂಜಾವದಲಿ
ಮೂಡಣದಲಿ ರವಿ ಬರುತಿರೆ
ಅವನ ಸ್ವಾಗತಿಸಲು
ಕೆಂಪು ಚಿತ್ತಾರದಲ್ಲೆ
ಅರುಣೋದಯ ಕಾವ್ಯ ಬರೆದನಲ್ಲ
ಇವನೆಂಥ ಕಾವ್ಯಗಾರ ?!

ಕಾಗೆಯ ಗೂಡಿನಲಿ
ಕೋಗಿಲೆಯ ಮರಿ ಚೆಲುವಿನಲಿ
ಹಕ್ಕಿಗಳ ಹಾಡಿನೊಳು
ಚೆಲುಕಾವ್ಯ ಹಾಡಿಸಿದನಲ್ಲ
ಇವನೆಂಥ ಹಾಡುಗಾರ ? !

ಸಿಂದಸಿಯಿಟ್ಟು ತಿಳಿಗಳಿಯೊಡನೆ
ಹೊತ್ತೇರುತಿರಲು
ರವಿಕಿರಣ ಸಂದೇಶ ಭೂದೇವಿಗೆ ಕೊಟ್ಟು
ಗೆಲುವುನಗೆ ಮೂಡಿಸಿದನಲ್ಲ
ಇವನೆಂಥ ಒಲುಮೆಗಾರ ? !

**ತುಮ್ಮುಜ್ಜೀರ ಭವಾನಿ ಉಲ್ಲಾಸ್, ಸುಳ್ಯ**

## ಪ್ರಪಂಚದ ವಿವಿಧ ವಿಷಯುಗಳ ಪಿತಾಮಹರು

ರೇಖಾ ಗಣಿತದ ಪಿತಾಮಹ – ಯೂರ್ಲಿಡ್
ತಳಶಾಸ್ತ್ರದ ಪಿತಾಮಹ – ಗ್ರಿಗರ್ ಮೆಂಡಲ್
ವಿಜ್ಞಾನದ ಪಿತಾಮಹ – ರೋಜರ್ ಬೇಕನ್
ವೈದ್ಯ ಶಾಸ್ತ್ರದ ಪಿತಾಮಹ - ಹಿಪ್ಪೋಕ್ರೆಟಿಸ್
ಆಧುನಿಕ ರಸಾಯನ ಶಾಸ್ತ್ರದ ಪಿತಾಮಹ - ಅಂಟೋನಿ ಲೆವೊಯ್‌ಸರ್
ಸಮಾಜ ಶಾಸ್ತ್ರದ ಪಿತಾಮಹ - ಆಗಸ್ಟ್ ಕೋಂಟ್
ಸಸ್ಯಶಾಸ್ತ್ರದ ಪಿತಾಮಹ - ಕಾರೋಲೆಸ್ ಲೀನಿಯಸ್
ಜೀವವಸ್ತುಗಳ ವರ್ಗೀಕರಣದ ಪಿತಾಮಹ - ಅರಿಸ್ಟಾಟಲ್
ಭಾರತೀಯ ಜ್ಯೋತಿಷ್ಯಕಲೆಯ ಪಿತಾಮಹ - ವರಾಹಮಿಹಿರ
ವಚನ ಸಂಪಾದನೆಯ ಪಿತಾಮಹ - ಫ. ಗು. ಹಳಕಟ್ಟಿ
ಭಾರತೀಯ ಚಲನಚಿತ್ರರಂಗದ " – ದಾದಾ ಸಾಹೇಬ ಪಾಲ್ಕೆ
ರಾಜ್ಯ ಶಾಸ್ತ್ರದ ಪಿತಾಮಹ – ಅರಿಸ್ಟಾಟಲ್
ಕಂಪ್ಯೂಟರ್‌ನ ಪಿತಾಮಹ - ಚಾರ್ಲ್ಸ್ ಬಬ್ಬೇಜ್
ಇತಿಹಾಸದ ಪಿತಾಮಹ – ಹೆರೋಡೆಟಾಸ್
ಅರ್ಥಶಾಸ್ತ್ರದ ಪಿತಾಮಹ – ಆಡಂಸ್ಮಿತ್
ವೈಜ್ಞಾನಿಕ ಸಮಾಜವಾದದ ಪಿತಾಮಹ - ಕಾರ್ಲ್‌ಮಾರ್ಕ್ಸ್
ಕನ್ನಡ ಪ್ರಹಸನದ ಪಿತಾಮಹ - ಟಿ.ಪಿ. ಕೈಲಾಸಂ
ಕರ್ನಾಟಕ ಸಂಗೀತದ ಪಿತಾಮಹ- – ಪುರಂದರದಾಸರು
ಪಕ್ಷಿಶಾಸ್ತ್ರದ ಪಿತಾಮಹ - ಸಲೀಂ ಆಲಿ
ಪುನರುಜ್ಜೀವನದ ಪಿತಾಮಹ – ಪೆಟ್ರೆಯಾರ್ಕ್
ಭಾರತದ ಆರ್ಥಿಕ ಯೋಜನೆಗಳ " – ಸರ್ ಎಂ.ವಿಶ್ವೇಶ್ವರಯ್ಯ
" ಕಾರ್ಮಿಕ ಆಂದೋಲನದ " - ಎನ್. ಎಂ. ಲೋಖಂಡೆ
ಒಲಂಪಿಕ್ಸ್ ಪಂದ್ಯಗಳ " ಪಿಯರೆಸ್ ವಿ. ಕೂರ್ಬಲೆನ್

○ ಸಂಗ್ರಹ : **ಮುಣ್ಣಂಡ್ರ ಈರಪ್ಪ ಚೈತ್ರ**, ಯವಕಪಾಡಿ

# ಗೌಡ ಸಮಾಜದ ಮಹಿಳಾ ಸಂಘಟಕಿಯಾದ ಶ್ರೀಮತಿ ಕೂಡಕಂಡಿರ ಹೊನ್ನಮ್ಮ ಉತ್ತಯ್ಯ

ನಮ್ಮ ಜೆನ ಯಾವ ಕೆಲ್ಸಕ್ಕೂ ಮುಂದೆ ಬಾದುಲೆನೆ, ನಮ್ ಹೆಣ್ ಮಕ್ಕಳ್ನ ನಾವೇ ಎಳ್ದ್ ಸೇರ್ಸ್ಕಣಕ್ಕೂ. ನಮ್ಮದ್ ಎಷ್ಟೊ ಹಳೇ ಪದ್ಧತಿಗ ಉಟ್ಟು. ಅದ್ ಎಷ್ಟ್ ಲಾಯ್ಕ ಗೊತ್ತುಟಾ.ಅವರ್ನ ನಾವ್ ಮರೆಯಕಾಗ್‌ದ್. ಅದರ್ನ ಮುಂದ್‌ವರ್ಸ್ಕಂಡ್ ಹೋಕು. ನಮ್ಮ ಸಂಸ್ಕೃತಿನ ಬುಡಿಕಾಗದ್.ಅಬ್ಬಾ ಮನೆಒಳಗೆ ಕಾಲ್ ಇಡುತ್ತಿದ್ದಂಗೆ ಹರಳು ಹುರ್ದಂಗೆ ಚಟಪಟಂತ ಮಾತಾಡುವ ಈ ಅಂಟೆ ಯಾರು ಗೊತ್ತೆ? ಅವರೆ ಕೂಡಕಂಡಿ ಮನೆ ಹೊನ್ನಮ್ಮ ಉತ್ತಯ್ಯನವರು.

ಬೆಂಗಳೂರಿನ ರಾಜ್‌ಮಹಲ್ ವಿಲಾಸದಲ್ಲಿರುವ ಅವರ ಮನೆಗೆ ಯಾರೇ ಹೋಗಲಿ ಅರೆ ಭಾಷೆಯ ಸ್ವಾಗತ ಇದ್ದೆ ಇರುತ್ತೆ. ‘ಲಾಯಕ್ಕೊಳರಿಯಾ” ಅಂತ ನಮ್ಮ ಭಾಷೆಯಲ್ಲಿ ಸುರು ಮಾಡಿದರೆ ಮುಂದಿರುವ ವ್ಯಕ್ತಿಗೆ ತಡವರಿಸಿಯಾದರು ಮಾತನಾಡುವ ಹಾಗೆ ಮಾಡುತ್ತಾರಿವರು. ಅಂತಹ ಕಾಳಜಿ ಇದೆ ಅರೆಭಾಷೆಯ ಬಗ್ಗೆ ಹಾಗೂ ನಮ್ಮ ಜನಾಂಗದ ಬಗ್ಗೆ.

ಹೈಸ್ಕೂಲು ತನಕ ಓದಿರುವ ಈಕೆಯ ವಾಕ್ಚಾತುರ್ಯವನ್ನಂತೂ ಯಾರು ಮರೆಯಲಾರರು. ಅಷ್ಟೇ ಚಟುವಟಿಕೆಯ ವ್ಯಕ್ತಿಯಾದ ಇವರಿಗೆ ನಮ್ಮ ಜನಾಂಗದ ಹೆಣ್ಣುಮಕ್ಕಳ ಬಗ್ಗೆ ಕಾಳಜಿ ವಹಿಸುವಲ್ಲಿ ಅತೀವ ಆಸಕ್ತಿ. ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗೌಡ ಸಮಾಜದ ಮಹಿಳಾ ಸಂಘಟನೆಯ ಸದಸ್ಯೆಯಾದ ಇವರು ತನ್ನ ಮನೆಯ ವಿಸ್ತಾರವಾದ ಅಂಗಣದಲ್ಲೆ ಒಮ್ಮೆ 40ಕ್ಕೂಹೆಚ್ಚು ಅರೆಭಾಷಿಕ ಮಹಿಳೆಯರನ್ನು ಸೇರಿಸಿ ವಿಚಾರ ವಿನಿಮಯ ಮಾಡಿಕೊಳ್ಳುವಲ್ಲಿ ಯಶಸ್ವಿಯಾದರು[ದಕ್ಷಿಣ ಕನ್ನಡ ಮತ್ತು ಕೊಡಗು ಗೌಡ ಸಮಾಜದ ಸಹಕಾರದೊಂದಿಗೆ].

ಚೆಟ್ಟ್ಯತ್ತೂರು ಗ್ರಾಮದ ಬಾರನ ಭೀಮಯ್ಯ ದಂಪತಿಗಳ ತುಂಬು ಕುಟುಂಬದಲ್ಲಿ ಬೆಳೆದ ಈಕೆಯು ಶಾಲಾ ವಿದ್ಯಾಭ್ಯಾಸ ವೆಲ್ಲವೂಹಳ್ಳಿಯಲ್ಲಿಯೇ ಆದರೂ ಕೂಡಕಂಡಿ ಉತ್ತಯ್ಯನವರ ಕೈ ಹಿಡಿದ ಮೇಲೆ ಬೆಂಗಳೂರಿಗೆ ಪ್ರಯಾಣ.

ಇಂದು ಇವರು ತನ್ನ ಪತಿಯನ್ನು ಕಳಕೊಂಡಿದ್ದರೂ, ಒಂದಿನಿತೂ ತನ್ನ ಬದುಕಿನ



**ಕೂಡಕಂಡಿರ ಹೊನ್ನಮ್ಮ ಉತ್ತಯ್ಯ**

ನೋವನ್ನು ತೋರ್ಪಡಿಸಿಕೊಳ್ಳದೆ, ಎಲ್ಲರೊಂದಿಗೆ ಕಲೆತು ಲವಲವಿಕೆಯಿಂದ ಓಡಾಡುವ ಇವರು ಯಾವುದೇ ಸಭೆ-ಸಮಾರಂಭಗಳಲ್ಲಿ ಎದ್ದು ಕಾಣುವ ವ್ಯಕ್ತಿತ್ವ.

ಮದುವೆ ಸಮಾರಂಭವಿದ್ದರಂತೂ ಪ್ರತಿಯೊಂದರಲ್ಲೂ ಮುಂದು. ಮದುವೆ ಸೋಭಾನೆ ಹೇಳುವುದೆಂದರೆ ಎಲ್ಲಿಲ್ಲದ ಆನಂದ ಇವರಿಗೆ. ಹಳೆಯ ಕಾಲದ ಶಾಸ್ತ್ರಗಳನ್ನು ಚಾಚು ತಪ್ಪದೆ ಸಮಾಜದ ಹಿರಿಕಿರಿಯರೆಲ್ಲರಿಗೂ ನಿರ್ದೇಶಿಸುತ್ತಿದ್ದರೆ ಅವರನ್ನು ನೋಡುವುದೇ ಒಂದು ಗಮ್ಮತ್ತು.

ಪ್ರೀತಿ, ಸಹನೆ, ವಾತ್ಸಲ್ಯಮಯಿಯಾದ ಇವರಿಗೆ 3 ಜನ ಮಕ್ಕಳು. ಹಿರಿಯ ಅಶೋಕ ಡೆಂಟಲ್ ಟೆಕ್ನೀಷಿಯನ್ ಆಗಿದ್ದರೆ, ಕಿರಿಯ ಭರತ್ ಫ್ಯಾಕ್ಟ್ರಿಯಲ್ಲಿ ಉದ್ಯೋಗಿ. ಏಕಮಾತ್ರ ಪುತ್ರಿ ಜಮುನ ಬ್ಯೂಟಿಪಾರ್ಲರನ ಒಡತಿಯಾಗಿ ಸೂದನ ಸದಾನಂದನ ಮಡದಿಯಾಗಿದ್ದಾಳೆ.ಮೂರು ಮಕ್ಕಳಿಗೂ ನಮ್ಮ ಜನಾಂಗದ ಬಗ್ಗೆ ಆಸ್ತೆ ವಹಿಸುವಂತೆ ಮಾಡುವಲ್ಲಿ ಇವರ ಪಾತ್ರ ಬಹುಮುಖ್ಯ.

ವಿದ್ಯೆ, ಅಂತಸ್ತು, ಐಶ್ವರ್ಯಗಳನ್ನೆಲ್ಲಾ ಮರೆತು ಒಂದೇ ಸಂಸ್ಕೃತಿಯ ಸೋದರಿಯರು ಎಂಬ ಏಕತಾ ಭಾವನೆಯಲ್ಲಿ ಬೆರೆತು ಕಲೆತು, ಕಷ್ಟ, ಸುಖ ವಿಚಾರಗಳ ವಿನಿಮಯ ಮಾಡಿಕೊಳ್ಳಬೇಕು. ಜೊತೆ ಜೊತೆಗೆ ಪ್ರತಿಭೆಗಳನ್ನು ಹೊರತರುವುದರಲ್ಲಿ ನಮ್ಮ ಜನಾಂಗದ ಹಿರಿಯರ ಆಶೀರ್ವಾದ, ಕಿರಿಯರ ಒಲುಮೆ, ಶ್ರೀಮಂತರ ಸಹಕಾರವನ್ನು ಇವರು ಬಯಸುತ್ತಾರೆ. ಇವರ ಈ ಕಾಳಜಿಗೆ ನಮ್ಮ ನಿಮ್ಮೆಲ್ಲರ ಸಹಕಾರದ ಅಗತ್ಯತೆ. ಅಲ್ಲದೆ ಇವರ ಮಾರ್ಗದರ್ಶನ ನಮ್ಮ ಕಿರಿಯರಿಗೆ ದಾರಿದೀಪವಾಗಲಿ ಎಂದು ಕೊಡಗು ಸಂಗಾತಿ ಹಾರೈಸುತ್ತದೆ.

**○ ಧನು ಚೆರಿಯಮನೆ**

---

**ಸೂಕ್ತಿ**

ವಿಜಯ ದ್ವೇಷವನ್ನು ಬಿತ್ತುತ್ತದೆ. ಸೋತವರು ಸಂಕಟದಲ್ಲಿ ಬದುಕುತ್ತಾರೆ. ಸೋಲು ಗೆಲುವುಗಳನ್ನು ಬಿಟ್ಟು ಕೊಟ್ಟು ಶಾಂತಿಯಿಂದ ಬದುಕುವವರೇ ನೆಮ್ಮದಿಯಿಂದ ಬದುಕುತ್ತಾರೆ.

**–ಗೌತಮಬುದ್ಧ**

# ನಾಟಕ : ಅ ವ ಳ ಗಂ ಡ

ಅಜ್ಜಿ :– ಸೋಮು...ಸೋಮು... ಲೇ ಸೋಮು...... ಎಲ್ಲೋದಪ್ಪಾ ನಮ್ ಸೋಮು

ಸೋಮು :– ಓ.. ಬಂದೆಜ್ಜಿ, ಬಂದೆ ಬಂದೆ. ಯಾಕಜ್ಜಿ ಕರೆದದ್ದು

ಅಜ್ಜಿ :– ಸೋಮು ನೀನು ಕಾಡಿಗೆ ಹೋಗಿ ಒಂದು ಹೊರೆ ಸೌದೆ ತೆಗೆದುಕೊಂಡು ಬಾ

ಸೋಮು :– ಅದೆಲ್ಲ ಬಿಡಜ್ಜಿ, ನನಗೊಂದು ಮದುವೆ ಆಗ ಬೇಕು ಅಜ್ಜಿ

ಅಜ್ಜಿ :– ಒಂದು ಕಾಸು ಕೂಡ ದುಡಿದು ಸಂಪಾದಿಸಲಾರದವ ನಿಗೆ ಯಾರು ಹೆಣ್ಣು ಕೊಡುತ್ತಾರೆ

ಸೋಮು :– ಓ ..ಹಾಗಾ ! ಆ ಸಂಗತಿ ಬಿಡಜ್ಜಿ, ಒಂದಾಣೆ ದುಡ್ಡು ಕೊಡು, ನಾನೊಂದು ಹುಡುಗಿಯನ್ನು ಮದುವೆ ಮಾಡಿ ಕೊಂಡುಬರುತ್ತೇನೆ

ಅಜ್ಜಿ:– ಒಂದಾಣೆಗೊಂದು ಹುಡುಗಿ ಸಿಗುವುದಾದರೆ ತಗೋ ಒಂದಾಣೆ ಹೋಗಿ ಮಾಡಿಕೊಂಡು ಬಾ.

[ಅಗಸನ ಪ್ರವೇಶ]

ಸೋಮು : ಅಣ್ಣಾ ಅಣ್ಣಾ ಪಕ್ಕದ ಮನೆ ಬ್ರಾಹ್ಮಣರ ಮನೆ ಯಲ್ಲಿ ದೊಡ್ಡ ಸಮಾರಾಧನೆಯಂತಲ್ಲ, ಹೋದವರಿಗೆಲ್ಲಾ ಊಟ ಹಾಕ್ತಾರೆ ನಾನು ಹೋಗಿ ಬಗೆಬಗೆಯ ಭಕ್ಷ್ಯ ತಿಂದು ಬಂದೆ. ನೀನು ಹೋಗಿ ಬಾ, ನೀನು ಬರುವವರೆಗೂ ನಿನ್ನ ಬಟ್ಟೆ ಗಂಟು ಹಿಡಿದು ನಾನು ಇಲ್ಲೆ ಕುಳಿತಿರುತ್ತೇನೆ.

ಅಗಸ : ನಿನ್ನ ಹೆಸರೇನಣ್ಣಾ ?

ಸೋಮು : ನನ್ನ ಹೆಸರು ಬಿರುಗಾಳಿ.

ಅಗಸ : ಏನೂ !

ಸೋಮು : ಬಿರುಗಾಳಿ

ಅಗಸ : ಎನೂ ?

ಸೋಮು : ಬಿ.. ರು ಗಾ...ಳಿ

[ಅಕ್ಕಸಾಲಿಗನ ಪ್ರವೇಶ]

ಸೋಮು : ಅಣ್ಣಾ ನೀನು ಆಭರಣಗಳ ಪೆಟ್ಟಿಗೆ ಹಿಡಿದು ಕೊಂಡು ಒಂಟಿಯಾಗಿ ಈ ಕಾಡಿನಲ್ಲಿ ಹೋಗುತ್ತಿದ್ದಿಯಲ್ಲ. ದಾರಿಯಲ್ಲಿ ನಾಲ್ಕು ಜನ ಕಳ್ಳರಿದ್ದಾರೆ. ನಾನು ಅವರ ಕಣ್ಣು ತಪ್ಪಿಸಿ ಹೇಗೊ ಬಂದುಬಿಟ್ಟೆ. ನೀನು ಮನೆಗೆ ಹೋಗಿ ಹತ್ತು ಜನ ಆಳುಗಳನ್ನು ಕರಕೊಂಡು ಬಾ ಅಲ್ಲಿಯವರೆಗೂ ಈ ಪೆಟ್ಟಿಗೆ ಯನ್ನು ಹಿಡಿದು ನಾನಿಲ್ಲಿ ಕುಳಿತುಕೊಂಡಿರುತ್ತೇನೆ.

ಅಕ್ಕಸಾಲಿಗ : ಅಯ್ಯೋ ! ನಾಲ್ಕು ಜನ ಕಳ್ಳರೇ ! ಈಗೇನು ಮಾಡುವುದು, ನಿನ್ನ ಉಪಾಯವೇ ಸರಿ.

ಸೋಮು : ಕಳ್ಳರನ್ನು ಒಬ್ಬನಿಂದ ತಪ್ಪಿಸುವುದು ಅಸಾಧ್ಯವಲ್ಲವೇ ಅಣ್ಣಾ ?

ಅಕ್ಕಸಾಲಿಗ : ನಿನ್ನ ಹೆಸರೇನಣ್ಣಾ ?

ಸೋಮು : ನನ್ನ ಹೆಸರು ಅದರೊಡೆಯ

ಅಕ್ಕಸಾಲಿಗ ಏನೂ

ಸೋಮು : ಅದರೊಡೆಯ

ಅಕ್ಕಸಾಲಿಗ : ಏನೂ !

ಸೋಮು : ಅದ...ರೊಡೆಯ

(ಅಜ್ಜಿಯ ಪ್ರವೇಶ)

ಸೋಮು : ಅಯ್ಯೋ ಅಜ್ಜಿ ಈ ಹುಡುಗಿಯ ಗಂಡ ಯಾವಾಗ ತೀರಿ ಹೋದದ್ದು.

ಅಜ್ಜಿ : ನಾನು ಈ ಹುಡುಗಿಯನ್ನು ವರ ಪರೀಕ್ಷೆಗೆ ಕರೆದು ಕೊಂಡು ಹೋಗುತ್ತಿರುವಾಗ ಅಪಶಕುನ ಮಾತಾಡುತ್ತಿದ್ದಿಯ

ಸೋಮು : ಅಪಶಕುನ ಏನೂ ಮಾತನಾಡಲಿಲ್ಲ.ಈ ಹುಡುಗಿಯ ಹಣೆಯಲ್ಲಿ ಕುಂಕುಮ ಇಟ್ಟಿಲ್ಲ, ಅದಕ್ಕಾಗಿ ಕೇಳಿದೆ ಅಷ್ಟೆ.

ಅಜ್ಜಿ : ಓ ಹಾಗಾ... ಈ ಹುಡುಗಿ ಈಗ ನಿನ್ನ ಬಳಿ ನಿಂತಿರಲಿ ನಾನು ಬೇಗನೆ ಮನೆಗೆ ಹೋಗಿ ಕುಂಕುಮ ತೆಗೆದುಕೊಂಡು ಬರುತ್ತೇನೆ. ಅಲ್ಲಿಯವರೆಗೂ ಇವಳನ್ನು ಜಾಗರೂಕತೆಯಿಂದ ನೋಡಿಕೊ.

ಸೋಮು : ಆಗಲಿ ಅಜ್ಜಿ ಅದಕೇನಂತೆ

ಅಜ್ಜಿ : ನಿನ್ನ ಹೆಸರೇನಪ್ಪಾ ?

ಸೋಮು : ಅವಳ ಗಂಡ

ಅಜ್ಜಿ : ಏನೂ

ಸೋಮು : ಅ...ವ...ಳ...ಗಂ...ಡ

ಅಜ್ಜಿ : ನಾನೀಗಲೇ ಬಂದೆ

ಸೋಮು : ಏ ಹುಡುಗಿ ನಿನ್ನನ್ನು ಮದುವೆಯಾಗಲಿರುವವ ಒಬ್ಬ ರಾಕ್ಷಸ ಆದುದರಿಂದ ನೀನು ನನ್ನೊಂದಿಗೆ ಬಂದರೆ ಈ ರಾಕ್ಷಸನಿಂದ ತಪ್ಪಿಸಿಕೊಳ್ಳಬಹುದು

[ರಾಜನ ಪ್ರವೇಶ]

ಅಗಸ : ಪ್ರಭುಗಳೇ ವಂದಿಸಿಕೊಂಡಿದ್ದೇನೆ

ರಾಜ : ಯಾಕಾಗಿ ಇಷ್ಟೊಂದು ಅವಸರದಿಂದ ಬಂದೆ

ಅಗಸ : ಪ್ರಭುಗಳೇ ನನ್ನ ಬಟ್ಟೆಗಳನ್ನು ಬಿರುಗಾಳಿ ಕೊಂಡು ಹೋದ

ರಾಜ : ನಿನ್ನ ಬಟ್ಟೆಗಳನ್ನು ಬಿರುಗಾಳಿ ಕೊಂಡು ಹೋದರೆ ನಾನೇನು ಮಾಡಲಿ ? ನೀನೆ ಸ್ವಲ್ಪ ಜಾಗ್ರತೆ ವಹಿಸಬೇಕಿತ್ತು ಇಕೋ ನಿನಗೆ ಪರಿಹಾರ.

ಅಕ್ಕಸಾಲಿಗ : ಪ್ರಭುಗಳೇ ವಂದಿಸಿಕೊಂಡಿದ್ದೇನೆ.

ರಾಜ : ಯಾಕೆ ಇಷ್ಟು ಬೇಸರದಲ್ಲಿದ್ದಾಗೆ ಕಾಣುತ್ತೆ

ಅಕ್ಕಸಾಲಿಗ : ಸ್ವಾಮಿ ನನ್ನ ಆಭರಣಗಳನ್ನು ಅದರೊಡೆಯ ಕೊಂಡು ಹೋದ

ರಾಜ : ಅಯ್ಯೋ ! ನಿಮಗೆಲ್ಲಾ ಹುಚ್ಚು ಹಿಡಿದಿದೆಯೋ ಹೇಗೆ ಆಭರಣಗಳನ್ನು ಅದರೊಡೆಯ ಕೊಂಡು ಹೋದರೆ ನನ್ನಲ್ಲೇಕೆ ದೂರು ? ಬಹುಶಃ ಮಜೂರಿ ಕೊಟ್ಟಿಲ್ಲವೋ ಏನೋ. ಇಕೋ ಪರಿಹಾರ

ಅಜ್ಜಿ : ವಂದನೆಗಳು ಪ್ರಭುಗಳೇ

ರಾಜ : ಎದ್ದೇಳು ಏನಾಯ್ತು

ಅಜ್ಜಿ : ಪ್ರಭುಗಳೇ ನನ್ನ ಮೊಮ್ಮಗಳನ್ನು ಅವಳಗಂಡ ಕರೆದು ಕೊಂಡು ಹೋದನು ಸ್ವಾಮಿ

ರಾಜ : ಅಜ್ಜಿ ನಿನಗೇನು ಹುಚ್ಚು ಹಿಡಿದಿದೆಯೋ? ಮೊಮ್ಮಗಳನ್ನು ಅವಳ ಗಂಡ ಕರೆದೊಯ್ಯದೆ ಮತ್ತೆ ಇನ್ಯಾರು ಕರೆದೊಯ್ಯುವುದು. ಈಗ ನೀನು ಹೊಟ್ಟೆತುಂಬಾ ಊಟ ಮಾಡಿ ಮನೆಗೆ ಹೋಗು.

[ಸೋಮು ಈಗ ಹುಡುಗಿಯ ಸಮೇತ ಮನೆಗೆ ಬರುತ್ತಾನೆ]

ಸೋಮು : ಅಜ್ಜಿ ಇಗೋ ನಾನು ಬಂದೆ. ಒಂದಾಣೆಗೊಂದು ಹುಡುಗಿಯನ್ನು ಮದುವೆ ಮಾಡಿಕೊಂಡು ಬಂದಿರುತ್ತೇನೆ.

ಅಜ್ಜಿ : ಓಹೋ ಒಂದಾಣೆಗೊಂದು ಹುಡುಗಿ ಸಿಗುತ್ತಾಳಾ ? ಇರಲಿ ನಿಮಗೆ ದೇವರು ಒಳ್ಳೆಯದು ಮಾಡಲಿ.

ಸೋಮು : ಅಜ್ಜಿ ನಾನೀಗ ಬರುತ್ತೇನೆ. ನಮಸ್ಕಾರಗಳು

ರಚನೆ : **ಡಿ.ಜೆ. ವನಜಾಕ್ಷಿ,** ಸುಳ್ಯ

# ದೇವರ ಮನೆ

ದೇವರ ಮನೆ ಇದು ಜಗವೆಲ್ಲ
ಬಾಡಿಗೆದಾರರು ನಾವುಗಳೆಲ್ಲ ॥
ಇಷ್ಟೇ ವರುಷ, ಇಷ್ಟೇ ದಿನಸ,
ಇರಬೇಕೆನ್ನುವ ಕಟ್ಟೆ ಕರಾರು
ಏನಿಹುದೆಂದು ಅರಿತು ಜನತೆಗೆ ಸಾರಿದವರ್ಯಾರು ॥
ನುಡಿಯುವುದೆಲ್ಲ ಜಂಭದ ಮಾತು
ಅಂತ್ಯಕೆ ತೋರುವುದು ಆ ನುಡಿ ಬರೀ ತೂತು ।
ಈಗಲೇ ಬಿಡುವುದು ಬಿಡಬೇಕೆಂದರೆ
ನಾ ಬಿಡಲಾರೆ ಇನ್ನೂ ಇರುವೆ.........
ಎಂದರೆ ನಡೆಯದು ಈ ಪ್ರತಿಕಾರ ಈ ಭುವಿಯೊಳಗೆ ॥
ದೇವರು ಕೊಟ್ಟಿಹುದು ಆತನ ಕರುಣೆ
ಒಂದಿಷ್ಟಾದರೂ ಗೈಯ್ಯಬೇಕು ಆತನ ಸ್ಮರಣೆ ।
ಅದಿಲ್ಲದೆ ಆ ನೆಲ ನನ್ನದು, ಈ ನೆಲ ನನ್ನದು,
ಎಂದು ಹೊಡೆದಾಡಿ – ರಕ್ತಕೋಡಿ ಹರಿಸಿರೆ
ಸೃಷ್ಟಿಯಕರ್ತ ನಗುವನು ಮನುಜನ ಹೀನ ಬುದ್ಧಿಯ ಕಂಡು॥
ಮಾನವ ಜನ್ಮದ ನಾವೆಲ್ಲರೂ ಬಾಡಿಗೆದಾರರು
ಸಲ್ಲಿಸಬೇಕು ಬಾಡಿಗೆಯ ಆ ಭಗವಂತನಿಗೆ ।
ನಾನಿರುವುದು ದೇವರ ಆಸ್ತಿ
ಈ ಜಗವೆಲ್ಲ ದೇವರ ಸವತಿ
ಒಳಿತು ಇದ ತಿಳಿದರೆ ಸಲ್ಲಿತು ಬಾಡಿಗೆ ಆ ದೇವರಿಗೆ ॥

**ಉರುಂಡೆ ಆರ್. ರುಕ್ಮಿಣಿ,** ಅವಂದೂರು

4ನೇ ಪುಟ ದಿಂದ

ವಾಗ ಬೀಳ್ಕೊಡುವ ರೀತಿಯಲ್ಲಿ ಸಂಸಾರ ಸಮೇತ ಬೀಳ್ಕೊಟ್ಟರು. ಇಂತಹ ವ್ಯಕ್ತಿಗಳು ಸಮಾಜದಲ್ಲಿ ಬೆರಳೆಣಿಕೆಯಷ್ಟಿದ್ದರೂ ಸಾಕು ನಮ್ಮ ಭಾಷೆ, ಸಂಸ್ಕೃತಿ, ಉಡಿಗೆ, ತೊಡಿಗೆಯನ್ನು ಉಳಿಸಿ ಬೆಳೆಸಬಹುದೆಂದು ನನ್ನ ವಿಶ್ವಾಸ. ಕೊನೆಗೂ ಹೆಚ್ಚು ಕಡಿಮೆ 99%ರಷ್ಟು ನಮ್ಮ ಮೈಸೂರಿನ ಅರೆಭಾಷೆ ಜನಾಂಗದವರು ಸ್ಪಂದಿಸಿ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿ ಧನಸಹಾಯದೊಂದಿಗೆ ಸಹಕಾರ ನೀಡಿ ನಮ್ಮ ಕಾರ್ಯಕ್ರಮ ಫಲಪ್ರದವಾಗಲೆಂದು ಹಾರೈಸಿದ್ದಾರೆ. ಅವರಿಗೆಲ್ಲ ನಮ್ಮ ವಂದನೆಗಳು.

○ **ತಡಿಯಪ್ಪನ ಕುಮಾರಜಯ**
ಅಧ್ಯಕ್ಷರು ಅರೆಭಾಷಿಕ ಸಾಂಸ್ಕೃತಿಕ ಸಮಿತಿ
ಮೈಸೂರು

## ಮಡಿಕೇರಿಯಲ್ಲಿ ಕೊಡಗು ಸಂಗಾತಿ ಕಛೇರಿ

**ಸಂಪರ್ಕಿಸಿ :**

**ಕೊಡಗು ಸಂಗಾತಿ,** C/o ನಂಗಾರು ಆಡಿಯೋ ಮತ್ತು **ವೀಡಿಯೋ**
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ ಮಡಿಕೇರಿ

ಕೊಡಗು ಸಂಗಾತಿಯ ಪ್ರಥಮ ಸಂಚಿಕೆಯಿಂದ ಹಿಡಿದು ಇತ್ತೀಚಿನ ಸಂಚಿಕೆಯು ಅಲ್ಲದೆ ಪ್ರಥಮ ವಾರ್ಷಿಕ ಸಂಚಿಕೆಯು ಸಹ ದೊರೆಯುತ್ತದೆ. ಹಾಗೆಯೇ ಸಂಗಾತಿಯ ಸಂಘಟನೆಯ ಚಿನ್ಹೆಯು ಸಹ ಲಭ್ಯ. ಕೊಡಗಿನ ಪೀಟವು ಸಹ ಸಿಗುತ್ತದೆ.

– **ಸಂಪಾದಕ**

## ಓದುಗರ ಗಮನಕ್ಕೆ

ಕೊಡಗು ಸಂಗಾಯ ಪ್ರಥಮ ವರ್ಷದ ವಾರ್ಷಿಕ ಸಂಚಿಕೆ ಬಿಡುಗಡೆಯಾದ ನಿಮಿತ್ತ ಮಾನ್ಯ ಓದುಗರು, ಹಿತೈಷಿಗಳು ಇದನ್ನೇ ಏಪ್ರಿಲ್ ತಿಂಗಳ ಸಂಚಿಕೆಗಳೆಂದು ಪರಿಗಣಿಸಿಕೊಳ್ಳತಕ್ಕದ್ದು ಎಂದು ಪ್ರಾರ್ಥನೆ.

– **ಸಂಪಾದಕ**

# ಮೈಸೂರಿನ ಕಲಾಮಂದಿರದಲ್ಲಿ ಮನಸೂರೆಗೊಂಡು ರಂಜಿಸಿದ ಅರೆಭಾಷೆ ಗೌಡರ ಸಂಸ್ಕೃತಿಕ ಕಾರ್ಯಕ್ರಮ ಮತ್ತು ಕೊಡಗು ಸಂಗಾತಿ ಪತ್ರಿಕೆಯ ವಾರ್ಷಿಕೋತ್ಸವ ಸಂಭ್ರಮ

**ಮೈ**ಸೂರಿನಲ್ಲಿ ನೆಲೆಸಿರುವ ಅರೆಭಾಷೆ ಗೌಡರ ಚರಿತ್ರೆಯಲ್ಲಿಯೇ ಬರೆದಿಡಬೇಕಾದ ಒಂದು ಮಹತ್ವದ ಶುಭದಿನ **12-4-1998ನೇ** ಭಾನುವಾರ. ಆ ದಿನ ಕೊಡಗು ಸಂಗಾತಿ ಪತ್ರಿಕೆಯ ಪ್ರಥಮ ವರ್ಷದ ವಾರ್ಷಿಕೋತ್ಸವ ಹಾಗೂ ಅರೆಭಾಷಿಕ ಸಾಂಸ್ಕೃತಿಕ ಕಾರ್ಯಕ್ರಮವಿದ್ದಿತು. ಈ ಎರಡು ಕಾರ್ಯಕ್ರಮವನ್ನು ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಕೊಡಗು ಮತ್ತು ದ. ಕ. ಜಿಲ್ಲಾ ಮಹಿಳಾ ಒಕ್ಕೂಟ ಹಾಗೂ ಕೊಡಗು ಸಂಗಾತಿ ಪತ್ರಿಕಾ ಬಳಗದ ಸಂಯುಕ್ತ ಆಶ್ರಯದಲ್ಲಿ ನಿಯೋಜಿಸಲಾಗಿತ್ತು.

ಕಾರ್ಯಕ್ರಮದಂತೆ ಪೂರ್ವಾಹ್ನ 11 ಗಂಟೆಗೆ ಮಂಗಳವಾದ್ಯ ನುಡಿಸುತ್ತಿದ್ದಂತೆ ಸಮಾಜ ಭಾಂಧವರ ಆಗಮನವಾಗುತಿತ್ತು. ಬರುತ್ತಿದ್ದಂತೆ ಸಂಸ್ಕೃತಿಯ ಉಡಿಗೆಯಲ್ಲಿದ್ದ ನಮ್ಮ ಮಹಿಳೆಯರು, ಮಹನೀಯರು ಹಾಗೂ ಮಕ್ಕಳು ನಮ್ಮ ಹಳೇ ಸಂಪ್ರದಾಯದ ಕುಪ್ಪಸ ದಟ್ಟಿ, ರುಮಾಲು ಮತ್ತು ಗೇಂಟಿ ಕಟ್ಟಿ ಸೀರೆ ಉಟ್ಟು ಪದ್ಧತಿಯಂತೆ ಬಂದ ಭಾಂಧವರನ್ನು ಕಲಾಮಂದಿರದೊಳಗೆ ಬರಮಾಡಿಕೊಳ್ಳುತ್ತಿದ್ದರು. ಇದೊಂದು ಕಣ್ಮರೆಯಾಗುತ್ತಿರುವ ನಮ್ಮದೇ ಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸುವ ಮಹತ್ವದ ವಿಷಯವಾಗಿತ್ತು.

ಅರೆಭಾಷಿಕ ಸಾಂಸ್ಕೃತಿಕ ಸಮಿತಿಯ ಕಾರ್ಯದರ್ಶಿಯವರಾದ ಕು|| ಗೀತಾ ಮೋಂಟಡ್ಕರವರ ಪ್ರಾರ್ಥನೆಯೊಂದಿಗೆ ಸಭೆಯು ಪ್ರಾರಂಭವಾಯಿತು. ಅಂದಿನ ಕಲಾಪದ ಮುಖ್ಯ ಅತಿಥಿಗಳಾಗಿ ಬೆಂಗಳೂರಿನಿಂದ ಶ್ರೀ ಪೂಜಾರಿ ಮೊಣ್ಣಪ್ಪನವರು ಮತ್ತು ಮೈಸೂರಿನಿಂದ ಮಾಜಿ ಮೇಯರ್ ವಾಸುರವರು, ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ಅಧ್ಯಕ್ಷರಾದ ಶ್ರೀ ಗುಡ್ಡೆಮನೆ ರಮೇಶ್‌ರವರು ಮತ್ತು ಕೊಡಗು ಗೌಡ ಮಹಿಳಾ ಒಕ್ಕೂಟದ ಅಧ್ಯಕ್ಷಿಣಿಯಾದ ಚೆಯೆಂಡಿರ ರಾಧ ಯಾಧವ್‌ರವರು ಆಗಮಿಸಿದ್ದರು. ವೇದಿಕೆಯಲ್ಲಿ ಅತಿಥಿಗಳಿಗೆ ಸಾಥಿಯಾಗಿ ಕೊಡಗು ಸಂಗಾತಿ ಪತ್ರಿಕೆಯ ಸಂಪಾದಕಿ ಪಟ್ಟಡ ಶೀಲಾಮಣಿಯವರು, ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕರಾದ ಪಟ್ಟಡ ಪ್ರಭಾಕರರವರು ಮತ್ತು ಅರೆಭಾಷಿಕ ಸಾಂಸ್ಕೃತಿಕ ಸಮಿತಿಯ ಅಧ್ಯಕ್ಷರಾದ ತಡಿಯಪ್ಪನ ಕುಮಾರಜಯರವರು ಹಾಗೂ ಕೊಡಗು ಮತ್ತು ದ. ಕ. ಜಿಲ್ಲಾ ಮಹಿಳಾ ಸಂಘಟನೆಯ ಅಧ್ಯಕ್ಷಿಣಿಯಾದ ಕುಂಭಗೌಡನ ಮುತ್ತಮ್ಮ ದೇವಯ್ಯನವರು ಆಸೀನರಾಗಿದ್ದರು.

ಮೊದಲಿಗೆ ಸಂಗಾತಿ ಪತ್ರಿಕೆಯ ಸಂಪಾದಕಿ ಪಟ್ಟಡ ಶೀಲಾಮಣಿಯವರು ಸ್ವಾಗತಿಸಿದರು. ಕು|| ಗೀತಾ ಮೋಂಟಡ್ಕರವರಿಂದ ಅತಿಥಿಗಳ ಪರಿಚಯವಾಯಿತು. ಪಟ್ಟಡ ಪ್ರಭಾಕರ ಮತ್ತು ತಡಿಯಪ್ಪನ ಕುಮಾರಜಯನವರು ಮುಖ್ಯ ಅತಿಥಿಗಳಿಗೆ ಮಾಲಾರ್ಪಣೆ ಮಾಡಿ, ಸ್ಮರಣಿಕೆಯನ್ನು ನೀಡಿದರು.

ಅನಂತರ ಪ್ರಾಸ್ತಾವಿಕ ಭಾಷಣವನ್ನು ಅರೆಭಾಷಿಕ ಸಾಂಸ್ಕೃತಿಕ ಸಮಿತಿಯ ಅಧ್ಯಕ್ಷರಾದ ತಡಿಯಪ್ಪನ ಕುಮಾರಜಯನವರು ಅರೆಭಾಷೆಯಲ್ಲಿ ಮಾತನಾಡಿದರು. ತಮ್ಮ ಭಾಷಣದಲ್ಲಿ ಅರೆಭಾಷಿಕ ಕಾರ್ಯಕ್ರಮದ ಧ್ಯೇಯೋದ್ದೇಶಗಳನ್ನು ಮತ್ತು ಅದರ ಅವಶ್ಯಕತೆಗಳನ್ನು ವಿವರಿಸಿ, ಮೈಸೂರಿನ ಅರೆಭಾಷಿಕ ಗೌಡ ಭಾಂಧವರು ಕಾರ್ಯಕ್ರಮಕ್ಕೆ ಸ್ಪಂಧಿಸಿದ ರೀತಿಯನ್ನು ಸಭೆಗೆ ವಿವರಿಸಿ ಹೇಳಿದರು.

ತದನಂತರ ಕೊ. ಸಂ. ಪತ್ರಿಕೆಯ ಗೌ|| ಸಂಪಾದಕರಾದ ಪ್ರಭಾಕರನವರು "ಕೊಡಗು ಸಂಗಾತಿ" ಪತ್ರಿಕೆ ನಡೆದು ಬಂದ ದಾರಿಯನ್ನು ಅರೆಭಾಷೆಯಲ್ಲಿಯೇ ವಾಚಿಸಿದರು. ಪತ್ರಿಕಾ ರಂಗದಲ್ಲಿ ತನಗರಿವಿಲ್ಲದೆಯೇ ಆದ ಒಂದು ವರ್ಷದ ಅನುಭವವನ್ನು ತಮ್ಮ ಹೃದಯಾಂತರಾಳದಿಂದ ಹೊರಸೂಸಿ, ಅವರ ನೋವು-ನಲಿವು, ಕಷ್ಟ-ಸುಖ ಮತ್ತು ನಷ್ಟಗಳ ವಿವರಣೆ ನೀಡಿ ಇಡೀ ಜನಾಂಗಕ್ಕೆ ಪತ್ರಿಕೆಯ ಅಗತ್ಯತೆಯನ್ನು ಬಿಡಿಸಿ ಹೇಳಿದರು.

ಸಮಾಜ ಭಾಂಧವರಿಗೂ ಗೌಡ ಸಮಾಜಕ್ಕೂ ತನ್ನನ್ನು ಜೀವನ ಪರ್ಯಂತ ತೊಡಗಿಸಿಕೊಂಡು ದುಡಿಯುತ್ತಿರುವ, ಬೆಂಗಳೂರಿನ ಕೊಡಗು ಮತ್ತು ದ. ಕ. ಜಿಲ್ಲಾ ಗೌಡ ಸಮಾಜವನ್ನು ಒಂದು ಮಾದರಿ ಸಮಾಜವನ್ನಾಗಿ ಮಾಡಿ, ಗೌಡರ ಏಳಿಗೆಗೆ ಹಗಲಿರುಳು ಶ್ರಮಿಸುತ್ತಿರುವ ಏಕೈ ವ್ಯಕ್ತಿ ಈ ಪೂಜಾರಿ ಮೊಣ್ಣಪ್ಪನವರು. ಇವರ ಅಸಾಧಾರಣ ವ್ಯಕ್ತಿತ್ವವನ್ನು ಗುರುತಿಸಿ, ಮೆಚ್ಚಿ ಅಂದಿನ ಸಭೆಯಲ್ಲಿ ಶ್ರೀಯುತರಿಗೆ ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕರಾದ ಪಟ್ಟಡ ಪ್ರಭಾಕರ್‌ರವರು ಪತ್ರಿಕೆಯ ಮತ್ತು ಬಳಗದ ಪರವಾಗಿ ವಿಶೇಷ ಕಾಣಿಕೆ ನೀಡಿ ಸನ್ಮಾನಿಸಿದರು.

ಮೈಸೂರಿನ ಜನಪ್ರಿಯ ವ್ಯಕ್ತಿಗಳಲ್ಲಿ ಒಬ್ಬರಾದ ಮತ್ತು ಮಾಜಿ ಮೇಯರ್ ಆದ ಶ್ರೀ ವಾಸುರವರು ಪ್ರಥಮ ವರ್ಷದ ವಿಶೇಷ ಸಂಚಿಕೆಯನ್ನು ಬಿಡುಗಡೆ ಮಾಡಿ ಒಂದೆರಡು ಮಾತುಗಳಲ್ಲಿ ನಮ್ಮ ಗೌಡ ಭಾಂಧವರಿಗೆ ಕಿವಿಮಾತು ಹೇಳಿದರು. ಮಾತಿನಲ್ಲಿ ಮುಂದುವರಿದ ಶ್ರೀಯುತರು ಸಂಘಟನೆಯ ಮಾರ್ಗ

ತುಂಬಾ ಕಠಿಣವಾದುದು. ಸಂಘಟನೆಯಲ್ಲಿ ಒಳ್ಳೆಯ ಹಾಗೂ ಕೆಟ್ಟ ಅಭಿಪ್ರಾಯ ಸರ್ವೆಸಾಮಾನ್ಯ. ಇದರ ನೋವು ಸಂಘಟಕರಿಗೆ ಮಾತ್ರ ಗೊತ್ತು, ಸಂಘಟನೆ ಬೆಳೆದು ನಿಂತ ಮೇಲೆ ಅದರ ಪದಾಧಿಕಾರಿಗಳ ಹುದ್ದೆಗೆ ಪೈಪೋಟಿ ನಡೆಯುವುದನ್ನು ನೋಡಿದರೆ ಸಂಸ್ಥಾಪಕರಿಗೆ ಸಹಿಸಲಾರದ ನೋವಾಗುತ್ತದೆ ಹಾಗೂ ನಮ್ಮಲ್ಲಿ ಕಾಲೆಳೆಯುವ ಪ್ರವೃತ್ತಿ ಜಾಸ್ತಿ. ಪ್ರಾಂತಿಯತೆಯನ್ನು ಬಿಟ್ಟು ಎಲ್ಲರು ನಮ್ಮವರು ಎಂದು ತಿಳಿದು ಮುಂದೆ ಸಾಗಬೇಕೆಂದು ಸೂಕ್ಷ್ಮವಾಗಿ ತಿಳಿಸಿದರು.

ಮತ್ತೂ ಮುಂದುವರಿದ ಇವರು ಒಂದು ಜನಾಂಗದ ಪರಿವರ್ತನೆಗಾಗಿ ಪತ್ರಿಕೆ ಅತೀ ಮುಖ್ಯ. ಮೈಸೂರಿನಲ್ಲಿ ಶಿರಕಜೆ ದೇವಯ್ಯನವರು ಗೌಡ ಸಂಘಟನೆಯನ್ನು 1960ರಷ್ಟು ಹಿಂದೆಯೇ ಮಾಡಿದ್ದಾರೆ. ಪೈಪೋಟಿಗಳು ಸಂಘಟನೆಗೆ ಅನಿವಾರ್ಯ. ಪ್ರಬಲವರ್ಗ ಮತ್ತು ಸಂಘಟಿತ ವರ್ಗಗಳ ಸಂಘಟನೆ ಆದಾಗ ವಿಭಜನೆ ಹಾದಿ ತುಳಿಯುತ್ತವೆ. ಸಮಾಜದಲ್ಲಿ ಕಾಲೆಳೆಯುವ ಪ್ರವೃತ್ತಿ ಸಾಮಾನ್ಯವಾದರು, ಸಂಘಟನೆ ಕಟ್ಟಲು ದೃಢ ನಿರ್ಧಾರ ಬೇಕು. ಹಾಗೇನೆ ಜಿಲ್ಲಾ ಪ್ರಕಾರಗಳಲ್ಲಿ ಕಂದಕ ನಿರಬಾರದು. ಗೌಡ ಜನಾಂಗ ಒಂದು ಶಾಪಗ್ರಸ್ತ ಸಮಾಜ. ಅದನ್ನು ತೊಡೆದು ಹಾಕಲು ಯುವಕ ಯುವತಿಯರು ಮುಂದೆ ಬರಬೇಕು. ಜಾತಿಯತೆಗೆ ಯಾರು ಹೆದರಬೇಕಾಗಿಲ್ಲ. ನನಗಾಗಿ ಸಮಾಜ ಅಲ್ಲ, ಸಮಾಜಕ್ಕಾಗಿ ನಾನು ಏನು ಮಾಡಿದ್ದೇನೆ ಅನ್ನುವುದು ಅತೀ ಮುಖ್ಯ. ಸಂಘಟನೆಗೆ ಪತ್ರಿಕೆ ಅನಿವಾರ್ಯವಾದ್ದರಿಂದ ಪತ್ರಿಕೆಯನ್ನು ಪ್ರತಿಯೊಬ್ಬರು ಕೊಂಡು ಓದುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳಬೇಕು. ತಮ್ಮ ಸಂಸ್ಕೃತಿಯನ್ನು ಹಂಚಿಕೊಳ್ಳಬೇಕು ಅದಕ್ಕಾಗಿ ಸಿರಿವಂತರ ಸಹಕಾರ ಕೋರುತ್ತಾ, ಕೊಡಗು ಸಂಗಾತಿ ಪತ್ರಿಕೆಯ ಕಾರ್ಯಶೈಲಿಯನ್ನು ಸಂಘಟನೆ ಧ್ಯೇಯ ಹೊತ್ತು ಜನಾಂಗಕ್ಕಾಗಿ ಶ್ರಮಿಸುವ ಕಾರ್ಯವೈಖರಿಯನ್ನು ಪ್ರಶಂಸಿಸಿದರು.

ಕೊಡಗು ಗೌ. ಸಾಂಸ್ಕೃತಿಕ ಅಕಾಡೆಮಿಯ ಉಪಾಧ್ಯಕ್ಷರಾದ ಗುಡ್ಡೆಮನೆ ರಮೇಶ್‌ರವರು ಮಾತಾನಾಡಿ ನಮ್ಮ ಭಾಷೆಯನ್ನು ಸಂಸ್ಕೃತಿಯನ್ನು, ಉಡಿಗೆ ತೊಡಿಗೆಯನ್ನು, ಆಚಾರ ವಿಚಾರವನ್ನು ಬೆಳೆಸಬೇಕು. ಮೇಲು ಕೀಳೆಂಬ ಅಹಂ ಇದ್ದರೆ ಅದು ಸಂಘಟನೆಗೆ ಅಪಾಯವೆಂದು, ನಾವೆಲ್ಲ ಒಂದೇ ವೇದಿಕೆಯಲ್ಲಿ ಹೋಗಬೇಕು. ಇಲ್ಲದಿದ್ದರೆ ನಮ್ಮ ಸಂಸ್ಕೃತಿಗೆ ಹಾಗೂ ಗೌಡ ಜನಾಂಗಕ್ಕೆ ಗಂಡಾಂತರ ಖಂಡಿತಾ. ಆದುದರಿಂದ ಸ್ವಯಂ ಪ್ರೇರಣೆಯಿಂದ ಕೈಲಾದಷ್ಟು ಸಮಾಜ ಸೇವೆ ಮಾಡಬೇಕೆಂದು ಒತ್ತಿ ಹೇಳಿದರು.

ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಪೂಜಾರಿ ಮೊಣ್ಣಪ್ಪನವರು ಮಾತನಾಡುತ್ತಾ ಪ್ರತಿಯೊಂದು ಹಂತದಲ್ಲಿಯು ಪ್ರಗತಿಪರ ಕೆಲಸಗಳು ರಾಜಕೀಯವಾಗಲಿ, ಸಾಮಾಜಿಕವಾಗಲಿ, ಕೈಗಾರಿಕಾ ರಂಗದಲ್ಲಿ ಆಗಲಿ ಕ್ರಾಂತಿಯಾಗಬೇಕಾದರೆ ಅದು ಮಧ್ಯಮವರ್ಗದ ಜನರಿಂದಲೇ ಆಗಬೇಕು. ಬಡವರು ಮುಂದೆ ಬರಲು ಹಿಂಜರಿದರೆ, ಹಣವಂತರು ಇಂತಹ ಸಮಾಜ ಸೇವೆಯಲ್ಲಾಗಲಿ ರಾಜಕೀಯದಲ್ಲಾಗಲೀ ಹಾಗೂ ಇನ್ನಿತರ ಸಂಘ ಸಂಸ್ಥೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದಿಲ್ಲ. ತಾನು ತನ್ನ ಹೆಂಡತಿ, ಮಕ್ಕಳಿಗೆ ಮಾತ್ರ ಸೀಮಿತವಾಗಿದ್ದಾರೆ ಶ್ರೀಮಂತ ವರ್ಗ. ಶ್ರೀಮಂತ ವರ್ಗದಿಂದ ನಮ್ಮ ಸಂಸ್ಕೃತಿಯನ್ನು ರಕ್ಷಿಸಲಾಗದು. ಇವರಿಂದ ಸಂಸ್ಕೃತಿ ನಶಿಸುತ್ತದೆ. ಇವರು ತಮ್ಮ ಅಮೂಲ್ಯ ಪರಂಪರೆಯುಳ್ಳ ಸಂಸ್ಕೃತಿಯನ್ನು ಬಿಟ್ಟು ಪಾಶ್ಚಿಮಾತ್ಯ ಸಂಸ್ಕೃತಿಗೆ ಒತ್ತುಕೊಡುತ್ತಿದ್ದಾರೆ. ಇದರಿಂದಾಗಿ ನಮ್ಮ ಮಧ್ಯಮ ವರ್ಗದವರು ಅವರನ್ನೇ ಹಿಂಬಾಲಿಸಲು ಕಾರಣರಾಗುವುದಲ್ಲದೆ ನಮ್ಮ ಸಂಸ್ಕೃತಿಯನ್ನು ಅದೋಗತಿಗೆ ತಳ್ಳುತ್ತಿದ್ದಾರೆ. ಪಾಶ್ಚಿಮಾತ್ಯರು ನಮ್ಮ ಸಂಸ್ಕೃತಿಯನ್ನು ಸ್ವಾಗತಿಸುತ್ತಿದ್ದು, ಇದೂ ನಾವು ಹೆಮ್ಮೆಪಡುವಂತ ವಿಷಯವಾಗಿದೆ. ಹೀಗಿರುವಾಗ ನಾವು ನಮ್ಮ ಸಂಸ್ಕೃತಿಯನ್ನು ಬಿಡದೆ ಉಳಿಸಿ, ಬೆಳೆಸಿ ಬೇರೆಯವರಿಗೆ ಮಾದರಿಯಾಗಬೇಕೆಂದು ತಿಳಿಸಿದರು.

ಪ್ರಥಮ ಸಾಂಸ್ಕೃತಿಕ ಸಮಾರಂಭ ನಡೆಸಲು ಕೊಡಗು ಸಂಗಾತಿಯೇ ಮುಖ್ಯ ಕಾರಣ. ಈ ಹಿಂದೆ ನಮ್ಮಲ್ಲಿ ಪತ್ರಿಕಾ ಮಾಧ್ಯಮ ಇರಲಿಲ್ಲ. ಇಂದು ಜನಾಂಗದ ವಿಷಯ ಸಂಗ್ರಹದ ಮಾಧ್ಯಮವಾಗಿ ಕೊಡಗಿನ ಮೂಲೆ ಮೂಲೆಗೂ, ಮನೆಮನೆಗೂ ತಲುಪುವ ವ್ಯವಸ್ಥೆಯಾಗಿದೆ. 1997-98 ಸುವರ್ಣವರ್ಷವೆನ್ನಬೇಕು. ಪತ್ರಿಕೆ ನಡೆಸುವುದು ಅಷ್ಟು ಸುಲಭವಲ್ಲ. ಶ್ರದ್ಧೆ ಅತೀ ಮುಖ್ಯ. ಅದಿಲ್ಲದಿದ್ದರೆ ಯಾವುದೇ ತರದಲ್ಲಿ ಪ್ರಗತಿ ಸಾದಿಸಲಾಗದು. ಭಾಷೆ ನಾಶ ಆದರೆ ಸಂಸ್ಕೃತಿ ನಾಶ ಆದ ಹಾಗೆ. ಹುಟ್ಟು ಸಾವಿನ ಆಳವಡಿಕೆಗೆ ಜಾತಿ ಸಂಸ್ಕೃತಿ ಉಳಿದಿದ್ದರಿಂದ ಮಾತ್ರವೇ ಜಾತಿ ಇದೆ ಎಂದರು. ಹಿಂದೂ ಸಮಾಜದ ಇತರ ಸಮಾಜ ಭಾಂಧವರು ತಮ್ಮ ತಮ್ಮ ಸಂಸ್ಕೃತಿಯನ್ನು ಮರೆಯುತ್ತಾ ಇದ್ದಾರೆ. ಎಲ್ಲವನ್ನು ಯೋಚಿಸಿದಾಗ ಮದ್ಯಮ ವರ್ಗದಿಂದ ಮಾತ್ರ ಸಂಸ್ಕೃತಿ ಉಳಿಯಲು ಸಾಧ್ಯವೆಂದು ಪ್ರತಿಪಾದಿಸಿದರು. ಏಕಸಮಾಜವಾಗಿ ಸಂಬಂಧಗಳು ಏರ್ಪಡಬೇಕು. ಇದೆಲ್ಲಾ ಆಗಲು ಆತ್ಮದಿಂದ ಹುಟ್ಟಬೇಕು ಜನಜಾಗೃತಿ. ಮಹಿಳಾಮಣಿಗಳು ಮತ್ತು ಯುವಕರು ಮುಂದೆ ಬಂದಲ್ಲಿ ಆದರೆ ಖಂಡಿತವಾಗಿಯೂ ನಮ್ಮ ಸಮಾಜವನ್ನು ದೀಮಂತ ಸಮಾಜವನ್ನಾಗಿ ಮಾರ್ಪಡಿಸಲು ಸಾಧ್ಯವಿದೆ ಎಂದು ಅಧ್ಯಕ್ಷ ಸ್ಥಾನದಿಂದ ಮಾತನಾಡುತ್ತಾ ಹೇಳಿದರು.

## ಮೈಸೂರಿನಲ್ಲಿ ಮನೆಮಾತಾದ ಅರೆಭಾಷೆ ಕಾರ್ಯಕ್ರಮ

1998ನೇ ಎಪ್ರಿಲ್ ತಿಂಗಳ 12ನೇ ತಾರೀಖು ಭಾನುವಾರ ನಮ್ಮ ಮೈಸೂರಿನ ಅರೆಭಾಷೆ ಗೌಡರಿಗೆ ಮರೆಯಲಾಗದ ಹಾಗೂ ಚರಿತ್ರೆಯಲ್ಲಿ ಬರೆದಿಡಬೇಕಾದ ಒಂದು ಸ್ಮರಣೀಯ ದಿನ. ಆದಿನ ಗೌಡ ಭಾಂಧವರಿಗೆ ಒಂದು ರೀತಿಯ ಮುಜುಗರ ಇದ್ದೇ ಇತ್ತು. ಎಂದರೆ ಈ ಕಾರ್ಯಕ್ರಮ ಹೇಗಾಗಬಹುದು ? ನೋಡಲು ಚೆನ್ನಾಗಿರುತ್ತದೆಯೇ? ಜನರು ಅರೆಭಾಷೆಯಲ್ಲಿ ಮಾತನಾಡಲು ಹಿಂಜರಿಯುವ ಈ ದಿನದಲ್ಲಿ ಅರೆಭಾಷೆ ಕಾರ್ಯಕ್ರಮ ಎಷ್ಟರ ಮಟ್ಟಿಗೆ ಯಶಸ್ವಿಯಾಗಬಹುದು ? ಎಂಬ ಗೃಹಿಕೆ ಈ ನಮ್ಮ ಜನರಲ್ಲಿ ಇತ್ತು. ಈ ಕಾರ್ಯಕ್ರಮ ನೋಡಲು ಕೊಡಗಿನ ಮೂಲೆಮೂಲೆಯಿಂದಲೂ, ಬೆಂಗಳೂರಿನಿಂದಲೂ, ಮೈಸೂರಿನಿಂದಲೂ, ಸುಳ್ಯದಿಂದಲೂ ಬಂದಿದ್ದರು. ಮಧ್ಯಾಹ್ನದ ಊಟವಾದ ಹಾಗೆ ಈ ನಮ್ಮ ಕಾರ್ಯಕ್ರಮವು ಎರಡೂವರೆ ಗಂಟೆಗೆ ಪ್ರಾರಂಭವಾಯಿತು.

ವೇದಿಕೆಯ ಪರದೆ ಸರಿದಂತೆ ಪ್ರೇಕ್ಷಕರಿಗೆ ಗೋಚರಿಸಿದ್ದು ನಮ್ಮ ಜನಾಂಗದ ಆರಾಧ್ಯ ದೇವತೆಯ ಹರಿಸೇವೆ ಕಾರ್ಯಕ್ರಮ. ಈ ಕಾರ್ಯಕ್ರಮವನ್ನು ನಡೆಸಿ ಕೊಟ್ಟವರು ಕೊಡಗು ಗೌಡ ಮಹಿಳಾ ಒಕ್ಕೂಟ ಮಡಿಕೇರಿಯವರು. ಚೊಕ್ಕಾಡಿ ಉಷಾ ಗಣಪತಿಯವರಿಂದ ಮನಮೆಚ್ಚುವ ಭರತನಾಟ್ಯ ಪ್ರದರ್ಶನವಾಯಿತು. ಹೊದ್ದೆಟಿ ಭವಾನಿಶಂಕರ್‌ರವರಿಂದ ಅರೆಭಾಷೆ ಹಾಡು, ಭಾಗಮಂಡಲದ ಕುದುಕುಳಿ ಇಂದಿರಾ ಭರತ್ ತಂಡದಿಂದ ಅರೆಭಾಷೆಯ ಜಾನಪದ ಕೋಲಾಟ, ತಡಿಯಪ್ಪನ ಅಮ್ಮವ್ವ ಕಾಳಪ್ಪಐಕೋಳ ಇವರಿಂದ ಅರೆಭಾಷೆ ಹಾಡು, ದಕ್ಷಿಣ ಕನ್ನಡ ಮತ್ತು ಕೊಡಗು ಮಹಿಳಾ ಸಂಘಟನೆ ಮೈಸೂರು, ಇವರಿಂದ ಜಾನಪದ ನೃತ್ಯ, ಕುಶಾಲನಗರ ಮಹಿಳಾ ಸಂಘಟನೆ ಇವರಿಂದ ಕೋಲಾಟ, ತಡಯಪ್ಪನ ಪದ್ಮಾವತಿ ಸಂಗಡಿಗರಿಂದ ಅರೆಭಾಷೆ ಹಾಡು, ಐಕೋಳದ ಶೀಲಾ ಪೊನ್ನಪ್ಪ ತಂಡದವರಿಂದ ಮದುವೆಯಲ್ಲಿ ಮಾಡುವ ಗಂಗೆಪೂಜೆ, ಬೆಂಗಳೂರಿನ ಅಮ್ಮಾಜೀರ ಪೊನ್ನಪ್ಪ ತಂಡದವರಿಂದ ಕಾವೇರಿ ನಾಡು ನೃತ್ಯ, ಕೊಡಗು ಸಾಂಸ್ಕೃತಿಕ ಅಕಾಡೆಮಿಯ ಮೊಟ್ಟನ ದೇವಯ್ಯ ತಂಡದಿಂದ ಹುತ್ತರಿಕೋಲಾಟ, ಅಂತರ್‌ರಾಷ್ಟ್ರೀಯ ಕಲಾವಿದೆ ಗೀತಾ ಮೋಂಟಡ್ಕ ಇವರಿಂದ ಪ್ರೇಕ್ಷಕರನ್ನೇ ಮೂಕವಿಸ್ಮಿತರನ್ನಾಗಿ ಮಾಡಿ ರಂಜಿಸಿದ ಮಿಮಿಕ್ರಿ ಕಾರ್ಯಕ್ರಮ ವಿಶೇಷವಾಗಿ ರಂಗೇರಿಸಿತು. ಚಿಕ್ಕಮಕ್ಕಳಾದ ಕತ್ರಿಕೊಲ್ಲಿ ನಿತ್ಯಾ ಮತ್ತು ದಂಬೆಕೋಡಿ ಮೌಲ್ವಿ ಪೂರ್ಣಚಂದ್ರ ಇವರಿಂದ ಹಾಡು, ಮುತ್ತಾಮರ್ಡಿ ತೆಕ್ಕಡೆ ಕುಮಾರ್‌ರವರಿಂದ ತದ್ರೂಪಿ ಚೌಂಡಿಕೋಲದ ರೂಪಕ ಮತ್ತು ಜನರಿಗೆ ಆಶ್ವಾಸನೆ ನೀಡುವಿಕೆ ತುಂಬಾ ಚೆನ್ನಾಗಿತ್ತು. ಭಾಗಮಂಡಲದ ಅಮುಲ್ ದೇವಯ್ಯನವರಿಂದ ಅರೆಭಾಷೆ ಜಾನಪದ ಗೀತೆ, ಐಕೊಳ ತಂಡದಿಂದ ಇನ್ನೊಂದು ಕೋಲಾಟ, ಅಭ್ಯತ್‌ಮಂಗಲದ ಹರಿಶ್ಚಂದ್ರ ಜಯಶ್ರೀ, ಬಿಂದು ಇವರಿಂದ ಅರೆಭಾಷೆಯಲ್ಲಿ ಹುತ್ತರಿ ಹಾಡು, ಭಾಗಮಂಡಲದ ಇಂದಿರಾ ಭರತ್ ತಂಡದಿಂದ ಅರೆಭಾಷೆಯಲ್ಲಿ ಜಾನಪದ ನೃತ್ಯ, ಕೋಕೇರಿಯ ಚಂಡೀರ ಸುಮಿತ್ರ ಅಪ್ಪಾಜಿಯವರಿಂದ ಅರೆಭಾಷೆಯ ಹಾಡು, ಕುಶಾಲನಗರದ ಮರದಾಳು ತಾರಗೋಪಾಲರವರಿಂದ ನೃತ್ಯ, ಭಾಗಮಂಡಲ ತಂಡದಿಂದ ಅಜ್ಜಿಯ ಸಡಗರ ನಾಟಕ, ಕುಶಾಲನಗರದ ಚೇತನ ಕಾಳಪ್ಪನವರಿಂದ ಜಾನಪದ ಹಾಡು, ಕುಶಾಲನಗರ ಮಹಿಳಾ ಸಂಘಟನೆಯಿಂದ ನೃತ್ಯ, ಮರದಾಳು ಬಿಂದು ಚಂದ್ರರವರಿಂದಲೂ ಮತ್ತು ಪಾಂಡನ ಜಸ್ಮಿನ್ ಮರಗೋಡು ಇವರಿಂದ ಕ್ಲಾಸಿಕಲ್ ಡ್ಯಾನ್ಸ್, ಮತ್ತು ನೃತ್ಯ, ಕುಶಾಲನಗರ ತಂಡದಿಂದ ಶೋಭಾನೆ ಮತ್ತು ಜಾನಪದ ನೃತ್ಯವು ಅಲ್ಲದೇ ಅರೆಭಾಷೆ ಪದ್ಯವನ್ನು ರಚಿಸಿ ಹಾಡಿದವರು ಬೆಂಗಳೂರಿನ ಹೊದ್ದೆಟಿ ಭವಾನಿಶಂಕರ್‌ರವರು.

ಈ ಮೇಲ್ಕಾಣಿಸಿದ ಎಲ್ಲಾ ತಂಡಗಳು ಒಂದಕ್ಕೆ ಇನ್ನೊಂದು ಕಮ್ಮಿ ಅಲ್ಲದಂತೆ ತೋರುತ್ತಿತ್ತು. ಈ ಕಾರ್ಯಕ್ರಮವನ್ನು ವೀಕ್ಷಿಸಿದ ನಮ್ಮ ಜನರು ಎರಡು ಮಾತಿಲ್ಲದೆ ತಮ್ಮನ್ನು ತಾವೇ ಗೌರವಿಸುವ ರೀತಿಯಲ್ಲಿ ಇದ್ದ ಅರೆಭಾಷೆ ಕಾರ್ಯಕ್ರಮದ ಬಗ್ಗೆ ಹೆಮ್ಮೆ ಪಟ್ಟುಕೊಂಡು ಶಿಸ್ತಿನಿಂದ ವರ್ತಿಸಿ, ಸ್ಫೂರ್ತಿ ನೀಡಿದಲ್ಲದೆ, ಇಂತಹದೆ ಕಾರ್ಯಕ್ರಮ ಪ್ರತಿವರ್ಷ ನಡೆಯುವಂತಾಗಬೇಕೆಂದು ಮಾತನಾಡಿಕೊಳ್ಳುತ್ತಿದ್ದದ್ದು ಸಾಮಾನ್ಯವಾಗಿತ್ತು. ಅರೆಭಾಷೆಯಲ್ಲಿಯೇ ಕಾರ್ಯಕ್ರಮ ನಡೆದು ಸುಂದರವಾದ ಸರಳವಾದ ಸೊಗಸಾದ ಈ ಭಾಷೆಯಲ್ಲಿ ಕಾರ್ಯಕ್ರಮ ಎಷ್ಟು ಚೆನ್ನಾಗಿ ಮೂಡಿ, ಬಂದಿದೆಯಲ್ಲಾ ಎನ್ನುತ್ತಾ ರಾತ್ರಿಯಾಗುತ್ತಿದ್ದುದರಿಂದ ತಮ್ಮ ಮನೆ ಕಡೆ ಹೆಜ್ಜೆಯಿಡುತ್ತಿದ್ದುದು ಹಾಗೂ ಕಾರ್ಯಕ್ರಮವನ್ನು ನಿಯೋಜಿಸಿದವರಿಗೆ ಧನ್ಯವಾದಗಳನ್ನು ಹೇಳುತ್ತಾ ಬೀಳ್ಕೊಡುತ್ತಿದ್ದ ದೃಶ್ಯ ನಿಜಕ್ಕೂ ಆನಂದವನ್ನು ತರಿಸುತಿತ್ತು. ಹಾಗೂ ಇದೊಂದು ಯಶಸ್ವಿ ಸಂಘಟನೆಯ ಕುರುಹು ಸಹ ಆಗಿತ್ತು.

○ -ವರದಿ

## ಸೂಕ್ತಿ

- ಗರ್ವದ ದೃಷ್ಟಿ, ಕೊಬ್ಬಿದ ಹೃದಯ, ದುಷ್ಟರ ಭಾಗ್ಯ ಇವು ಧರ್ಮದ ವಿರುದ್ಧ.
- ಕಾಡುವ ಜಗಳಗಂಟಿಯ ಸಹವಾಸಕ್ಕಿಂತಲೂ, ಕಾಡಿನ ವಾಸವೇ ಲೇಸು.

# ಹಿಂದುಳಿದ ಜಾತಿ ಸರ್ಟಿಫಿಕೇಟ್ ಬಗ್ಗೆ

**ತಾ॥** 12-4-98ರಲ್ಲಿ ಮೈಸೂರಿನ ಕಲಾಮಂದಿರದಲ್ಲಿ ನಡೆದ ಕೊಡಗು ಸಂಗಾತಿಯ ಒಂದನೇ ವಾರ್ಷಿಕೋತ್ಸವ, ಮೈಸೂರಿನ ಕೊಡಗು ಮತ್ತು ದ.ಕ.ಮಹಿಳಾ ಸಂಘಟನೆ ಹಾಗೂ ಅರೆಭಾಷಿಕ ಸಾಂಸ್ಕೃತಿಕ ಸಮಾವೇಷ ಇವು ಮೂರು ಸಂಸ್ಥೆಗಳು ಸೇರಿ ನಡೆಸಿದ ಕಾರ್ಯಕ್ರಮಗಳ ಸಂದರ್ಭದಲ್ಲಿ ಶ್ರೀಮತಿ ಕುಂಭುಗೌಡನ ಮುತ್ತಮ್ಮ ದೇವಯ್ಯನವರು ಗೌಡರು ಹಿಂದುಳಿದ ಪಟ್ಟಿಲಿ ಗೌಡರು ಯಾವ ಗುಂಪಿಗೆ ಸೇರಿದವರೆಂದು ಪ್ರಶ್ನಿ ಕೇಳಿದರು. ಅಲ್ಲಿಯೇ ಅದಕ್ಕೆ ಸಮಂಜಸವಾದ ಉತ್ತರವನ್ನು ಕೊಟ್ಟಿದ್ದೇನೆ. ಆದರೆ ಈ ವಿಷಯದ ಜಿಜ್ಞಾಸೆ ಈಗ ಸುಮಾರು 15-20 ವರ್ಷಗಳಿಂದ ಇದ್ದರೂ ನಮ್ಮ ಜನಾಂಗದ ವಿದ್ಯಾಸಂಘದವರಾಗಲೀ, ಗೌಡ ಸಮಾಜದವರಾಗಲೀ ಈ ವಿಷಯದಲ್ಲಿ ಸಂಬಂಧಪಟ್ಟವರೊಡನೆ ವ್ಯವಹರಿಸಿ ಸರಿಯಾದ ಪರಿಹಾರ ಮಾಡದೇ ಇರುವುದು ನಮ್ಮ ಜನರ ಜಡತೆಯನ್ನು ಎತ್ತಿತೋರಿಸುತ್ತದೆ ಎಂಬುದಾಗಿ ಹೇಳಬಹುದು. ಕಾರಣವೇನೆಂದರೆ ನಮ್ಮ ಜನಾಂಗದ ಸಂಘಟನೆಗಳು ಹಳೇಕಾಲದರೀತಿಯಲ್ಲಿಯೇ ಮುಂದುವರಿದುಕೊಂಡು ಹೋಗುತ್ತವೆಯೇ ಹೊರತು ದೇಶ ಯಾ ರಾಜ್ಯದಲ್ಲಿ ಆಗುವ ಬದಲಾವಣೆಗಳತ್ತ ಗಮನ ಹರಿಸದೇ ಇರುವುದು ಶೋಚನಿಯ ಸಂಗತಿಯಾಗಿದೆ. ಈ ವಿಷಯದಲ್ಲಿ ರಾಜಕೀಯ ಮುಖಂಡರೆ ಮಾಡಲಿ ಎಂದು ಕೈಕಟ್ಟಿ ಕೂತರ ಅದು ಸಾಧ್ಯವಾಗದು. ಯಾಕೆಂದರೆ ಎಂ.ಪಿ. ಯವರಾಗಲೀ, ಮಂತ್ರಿಗಳಿಂದಾಗಲೀ ಆಗುವುದಾದರೂ ಅದೇ ಕೆಲಸಕ್ಕೆ ಅವರ ಸಮಯವನ್ನು ಮೀಸಲಾಗಿರಿಸಲು ಸಾಧ್ಯವಿಲ್ಲ. ಅದಕ್ಕಾಗಿಯೇ ಒಬ್ಬ ವ್ಯಕ್ತಿಯನ್ನು ನೇಮಿಸಬೇಕು.

ಎರಡು ವರ್ಷಗಳ ಹಿಂದೆ ರಾಷ್ಟ್ರೀಯ ಹಿಂದುಳಿದಕಮಿಷನ್ ಬೆಂಗಳೂರಿಗೆ ಬಂದಿದ್ದಾಗ ಬೆಂಗಳೂರಿನ ಕೊಡಗು ಮತ್ತು ದ.ಕ. ಗೌಡ ಸಮಾಜ ಬೆಂಗಳೂರು, ಹಾಗೂ ಕೊ.ಗೌ.ಸ.ಬೆಂಗಳೂರಿನ ಜಂಟಿ ನಿಯೋಗ ಆಗಿನ ರಾಷ್ಟ್ರೀಯ ಹಿಂದುಳಿದ ವರ್ಗಗಳ ಕಮಿಶನ್‌ನ ಅಧ್ಯಕ್ಷರನ್ನು ಭೇಟಿ ಮಾಡಿದಾಗ, ನೀವು ಮೊದಲು ರಾಜ್ಯದ ಪಟ್ಟಿಯಲ್ಲಿ ನಿಮ್ಮ ಜಾತಿಯ ಹೆಸರನ್ನು ನೋಂದಾಯಿಸಿದ ನಂತರ ನಮಗೆ ನಿಮ್ಮ ಅರ್ಜಿಯನ್ನು ಕಳುಹಿಸಿ ಕೊಡಿ ಎಂದು ಹೇಳಿದರು. ಅದೇ ರೀತಿ ಕೊಡಗು ಮತ್ತು ದ.ಕ. ಗೌಡ ಸಮಾಜದವರು ರಾಜ್ಯದಹಿಂದುಳಿದ ಕಮಿಷನ್‌ನಲ್ಲಿ ಅರ್ಜಿಯನ್ನು ನೋಂದಾಯಿಸಲಾಗಿದೆ. ಆದರೆ ಕಮಿಷನ್‌ನವರು ಕೇಳುವ ಪ್ರಶ್ನೆಗಳಿಗೆ [ಪ್ರಶ್ನಾವಳಿ ತುಂಬಾ ಇದ್ದು] ಅವುಗಳಿಗೆ ಬೆಂಗಳೂರಿನಲ್ಲಿ ಕುಳಿತು ಉತ್ತರಿಸುವುದಕ್ಕೆ ಸಾಧ್ಯವಿಲ್ಲ. ಕಾರಣವೇನೆಂದರೆ ಎಸ್.ಎಸ್.ಎಲ್.ಸಿ.ಯಿಂದ ಹಿಡಿದು ಡಾಕ್ಟರೇಟ್ ಡಿಗ್ರಿಯವರೆಗೆ ಅಲ್ಲದೆ ಬೇರೆ ಬೇರೆ ವಿಧದ ಪದವಿಗಳ ವಿಷಯದಲ್ಲೂ ತಾಲ್ಲೂಕು, ಜಿಲ್ಲೆ ಮತ್ತು ರಾಜ್ಯ ಹಾಗೂ ರಾಷ್ಟ್ರದ ಶೇಕಡವಾರು ಸಂಖ್ಯೆಯನ್ನು ಕೇಳಿದ್ದಾರೆ. ಹಾಗಿರುವಾಗ ಒಂದು ಸ್ಥಳದಲ್ಲಿ ಕುಳಿತು ಈ ಪ್ರಶ್ನೆಗಳಿಗೆ ಉತ್ತರಿಸಲು ಸಾಧ್ಯವಿಲ್ಲ ಅಥವಾ ಒಂದು ವೇಳೆ ಉತ್ತರಿಸಿದರೂ ಅದು ತಪ್ಪಾಗುತ್ತದೆ. ಹಾಗಿರುವಾಗ ಅದಕ್ಕೆಂದೇ ಒಬ್ಬ ನುರಿತ ಹಾಗೂ ಪ್ರಾಮಾಣಿಕತೆಯಿಂದ ಕೆಲಸ ಮಾಡುವವರೊಬ್ಬರು ಬೇಕು. ಇದಕ್ಕೆ ಉಪಾಧ್ಯಾಯರಾಗಿ ನಿವೃತ್ತರಾದ ಒಬ್ಬರನ್ನು ನೇಮಿಸಿ ಅವರು ಪ್ರತಿ ತಾಲ್ಲೂಕಿನ ಸಂಬಂಧಪಟ್ಟ ಇಲಾಖೆಗಳನ್ನು ಸಂದರ್ಶಿಸಿ ಅನುಸೂಚಿಯಲ್ಲಿ ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿ ತಾಲ್ಲೂಕುಗಳಲ್ಲಿ ಸಿಕ್ಕಿದ ಉತ್ತರವನ್ನು ಜಿಲ್ಲಾಮಟ್ಟಕ್ಕೆ ಪರಿವರ್ತಿಸಿ ನಂತರ ರಾಜ್ಯಮಟ್ಟ ಹಾಗೂ ರಾಷ್ಟ್ರಮಟ್ಟಕ್ಕೆ ಪರಿವರ್ತಿಸಬೇಕು. ಇದಕ್ಕೆಲ್ಲ ಹಣ ಖರ್ಚಾಗುತ್ತದೆ. ಒಬ್ಬ ವ್ಯಕ್ತಿ ಕಡಿಮೆ ಎಂದರೆ 2–3 ತಿಂಗಳು ಕೆಲಸ ಮಾಡಬೇಕು, ಅಲ್ಲದೆ ಯಾವುದೇ ಸಂಘ ಯಾ ಸಮಾಜ ಇದಕ್ಕಾಗಿ ತಮ್ಮ ಹೆಸರನ್ನು ನೋಂದಾಯಿಸಿಕೊಳ್ಳಬೇಕು. ಈ ರೀತಿಯ ಕೆಲಸವನ್ನು ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಗಳು ಸೇರಿ ಮಾಡಬೇಕು. ಯಾಕೆಂದರೆ ನಮ್ಮ ಜಾತಿ ಇಂಗ್ಲೀಷಿನಲ್ಲಿ "GOWDA" ಕೊಡಗು ಹಾಗೂ ದಕ್ಷಿಣ ಜಿಲ್ಲೆಯಲ್ಲಿ ಬರೆಯುವುದರಿಂದ ಪಟ್ಟಿಯಲ್ಲೂ "GOWDA" ಎಂಬುದಾಗಿ ಬರಬೇಕು. ಆದರ ಸರ್ಕಾರದ ಪಟ್ಟಿಯಲ್ಲಿ "GOUDA" ಎಂಬುದಾಗಿ ಬರೆಯಲ್ಪಟ್ಟಿರುವುದರಿಂದ ಸರ್ಕಾರದ ಅಧಿಕಾರಿಗಳು ಕೊಡಗು ಮತ್ತು ದ. ಕ. ಗೌಡರನ್ನು ಹಿಂದುಳಿದವರ ಪಟ್ಟಿಗೆ ಸೇರಿಸಿಲ್ಲವೆಂದು ಹೇಳುತ್ತಾರೆ. ಕೇಂದ್ರ ಸರ್ಕಾರದ ಪಟ್ಟಿಯಲ್ಲಿ ನಮ್ಮ ಜನಾಂಗದ ಹೆಸರು ಸೇರದಿದ್ದರೆ ಕೇಂದ್ರ ಸರ್ಕಾರದ ಯಾವುದೇ ಉದ್ಯೋಗಕ್ಕೆ ನಮ್ಮ ಯುವಕ ಯುವತಿಯರು ಹಿಂದುಳಿದವರೆಂದು ಅರ್ಜಿ ಹಾಕುವುದಕ್ಕೆ ಸಾಧ್ಯವಿಲ್ಲದಾಗುತ್ತದೆ. ಹಾಗಾಗಿ ನಮ್ಮ ಯುವಕ ಯುವತಿಯರು ಶಾಲಾ ಕಾಲೇಜುಗಳಿಗೆ ಸೇರುವ ಸಮಯದಲ್ಲಿ ಹಾಗೂ ಉದ್ಯೋಗಕ್ಕೆ ಅರ್ಜಿ ಹಾಕುವ ಸಮಯದಲ್ಲಿ ಈ ಜಾತಿ ಸರ್ಟಿಫಿಕೇಟಿಗಾಗಿ ಪರದಾಡ ಬೇಕಾಗುತ್ತದೆ. ಈ ರೀತಿಯ ಪರದಾಟ ಈಗ 15-20 ವರ್ಷಗಳಿಂದಲೇ ನಡೆಯುತ್ತಿದೆ. ಈ ಜಾತಿ ಸರ್ಟಿಫಿಕೇಟು ಹಣವಂತರಿಗೆ ಅನ್ವಯಿಸುವುದಿಲ್ಲ. ಮಧ್ಯಮ ವರ್ಗ ಹಾಗೂ ಬಡವರ್ಗದವರಿಗೆ ಈ ಸರ್ಟಿಫಿಕೇಟ್ ಅವರ ಜೀವನದ ಮೇಲೆ ಪರಿಣಾಮ ಬೀಳುತ್ತದೆ ಕೊಡಗಿನ ಅಥವಾ ದ.ಕ. ಜಿಲ್ಲೆಯ ಮೂಲೆಮೂಲೆಯಲ್ಲಿರುವ ಬಡ ಹಾಗೂ ಮಧ್ಯಮ ವರ್ಗದ ಜನರ ಮಕ್ಕಳು ಬೆಂಗಳೂರು, ಮೈಸೂರು, ಮಂಗಳೂರು

(14ನೇ ಪುಟ ನೋಡಿ)

# ನಿಮ್ಮ ಪತ್ರಗಳು

## ಕೊಡಗು ಸಂಗಾತಿಯ 1ನೇ ವರ್ಷದ ಹುಟ್ಟು ಹಬ್ಬದ ಶುಭಾಶಯಗಳು

ಮಾನ್ಯರೆ,

1997ರ ಯುಗಾದಿಯಂದು ಮೈಸೂರಿನಲ್ಲಿ ಹುಟ್ಟಿದ ಸಂಗಾತಿಯು ಬೇಸಿಗೆಯ ಬಿಸಿಲ ಬೇಗೆಯನ್ನು ಸಹಿಸಿ, ಆಟಿ ತಿಂಗಳ ಜಡಿ ಮಳೆಯನ್ನು ಡಿಸಂಬರಿನ ಕೊರೆಯುವ ಚಳಿಯನ್ನು ಲೆಕ್ಕಿಸದೆ ವಾರಾನು– ತಿಂಗಳಾನುಗಟ್ಟಲೆ ಆರ್ಥಿಕ ಮುಗ್ಗಟ್ಟಿನಿಂದ ಮುಗ್ಗರಿಸಿ, ನಿದ್ರೆಯಿಲ್ಲದ ರಾತ್ರಿಗಳನ್ನು ಕಳೆದು, ಬೆಳಗಿನ ಚಳಗಾಳಿಗೆ ಬೆಚ್ಚಗಿನ ಕಂಬಳಿ ಹೊದ್ದು ಸುಖನಿದ್ರೆಯಲ್ಲಿದ್ದವರ ಬಾಗಿಲು ತಟ್ಟಿ ಅವರ ನಿದ್ರಾಭಂಗಕ್ಕೆ ಗುರಿಯಾಗಿ, ಅಪಹಾಸ್ಯ ಕುಹಕ ಮತ್ತು ವ್ಯಂಗ್ಯನುಡಿಗಳಿಂದ ನೊಂದು ಮತ್ತೊಂದೆಡೆ ಆತಂಕ ಆದರ್ಶ ಪ್ರೀತಿ ವಿಶ್ವಾಸವುಳ್ಳವರ ಕನಸುಗಳನ್ನು ನೆನಸು ಮಾಡುವ ಕನಸು ಕಾಣುತ್ತಾ ಹೊರಲಾರದ ಬಂಡೆಯೊಂದನ್ನು ಹೊತ್ತ ವೃದ್ಧನೊಬ್ಬನ ಚಿತ್ರಣವನ್ನು ನೆನಪಿಸುವ ಇಡೀ ಯುವ ಜನಾಂಗ ಮತ್ತು ಮಹಿಳೆಯರನಾದಿಯಾಗಿ ಒಮ್ಮೆಗೆ ಬಡಿದೆಬ್ಬಿಸಿದ ತನ್ನ ಕೊಡಗಿನ ಮೂಲನಿವಾಸಿಗಳನ್ನು ಹಿಡಿದೆಬ್ಬಿಸುವಂತೆ ಇಟ್ಟ ಮೊದಲ ಹೆಜ್ಜೆಯಿಂದ ಇಲ್ಲಿಯತನಕ ನಿಮ್ಮ 'ಕೊಡಗು ಸಂಗಾತಿ' ಮೂಲಕ ಮಾಡಿದ ಪ್ರಯತ್ನಕ್ಕೆ ನೀವು ಮತ್ತು ನಿಮ್ಮ ಸಂಗಾತಿ ಬಳಗದ ಪ್ರತಿಯೊಬ್ಬರಿಗೂ ನಮ್ಮ ಹೃತ್ಪೂರಕ ನಮನಗಳು. ಅಲ್ಲದೆ ಶ್ರೀ ಕುಲಗುರು ತಿರುಪತಿ ತಿಮ್ಮಪ್ಪ ಲಕ್ಷ್ಮೀ ಪದ್ಮಾವತಿ ಸಮೇತ ಮತ್ತೆ ಕೊಡಗಿನ ಉದ್ದಮೊಟ್ಟೆಯ ಝರಿ ಪಾರೆ ಬೆಟ್ಟದಲ್ಲಿ ಉದ್ಭವವಾಗುವ ಕನಸು ಹೊತ್ತ "ನನ್ನ ಕನಸಿನ ಮಡಿಕೇರಿ" ಯನ್ನು ಬರೆದ ಕೊ. ಸಂಗಾತಿಯ ಗೌ॥ ಸಂಪಾದಕರಾದ ಪಟ್ಟಡ ಪ್ರಭಾಕರ ಅವರ ಕನಸನ್ನು ನನಸು ಮಾಡಲು ಮತ್ತು ನಮ್ಮ ಗೌಡ ಜನಾಂಗದ ಒಗ್ಗಟ್ಟು ಸಹಬಾಳ್ವೆಯ ಸರ್ವ ಪ್ರಯತ್ನದತ್ತ ಮುನ್ನುಗ್ಗೋಣವೇ.

○ ಬೈತಡ್ಕ ಎ. ಬೆಳ್ಯಪ್ಪ

## ಅನಿಸಿಕೆಗಳು

ಮಾನ್ಯರೆ,

ಅರೆಭಾಷೆ ಗೌಡರಾಗಿದ್ದರಿಂದ ಮೊದಲು ವೆಂಕಟರಮಣನ ಪೂಜೆ ಸಲ್ಲಿಸಿ ಕಾರ್ಯಕ್ರಮ ಹಾಕಿಕೊಳ್ಳಬೇಕಿತ್ತು. ಪತ್ರಿಕೆಯವರು ಯಾಕೆ ಬಂದಿಲ್ಲ? ನಿರೂಪಣೆ ಮಾಡಿದ ಯುವತಿ ಗೇಂಟೆ ಕಟ್ಟಿ ಮೆರೆದಿದ್ದರೆ ರಾಜಕಳೆ ಬರುತ್ತಿತ್ತು ಅಲ್ಲವೇ.

ಹುದೇರಿ ಸೋಮಣ್ಣ, ಮೈಸೂರು

ನಿಜವಾಗಿಯೂ ನಾನು ನೋಡಿರುವ ಕೆಲವು ಒಳ್ಳೆಯ ಕಾರ್ಯಕ್ರಮದಲ್ಲಿ ಇದೂ ಒಂದು.

○ ಜಗದೀಶ್ ಮೈಸೂರು

ಕೊಡಗು ಅರೆಭಾಷೆಗೌಡರ ಸಾಂಪ್ರದಾಯಿಕ ಉಡುಪಿನಲ್ಲಿ ನಡೆದ ಕಾರ್ಯಕ್ರಮಗಳನ್ನು ಮೆಚ್ಚಬೇಕಾಗಿದ್ದೆ.

○ ಪ್ರೇಕ್ಷಕ

ನಿಜವಾಗಿಯೂ ಬಹಳ ಚೆನ್ನಾಗಿತ್ತು. ಚೆನ್ನಾಗಿಲ್ಲವೆಂದು ಹೇಳುವವರು ಗೌಡ ವಿರೋಧಿಗಳೇ.

○ ಅಶೋಕ ಕೋಳಿಮಾಡು

ಈ ರೀತಿಯಾಗಿ ಕಾರ್ಯಕ್ರಮ ನಡೆಯುತ್ತದೆ ಎಂದು ಅಂದುಕೊಂಡಿರಲಿಲ್ಲ. ನಿಜವಾಗಿಯೂ ಸಾಂಸ್ಕೃತಿಕ ಸಮಿತಿಯವರು ಅಭಿನಂದನಾರ್ಹರು.

○ ಲಿಂಗಪ್ಪ ಮೈಸೂರು

ಕಾರ್ಯಕ್ರಮ ಚೆನ್ನಾಗಿತ್ತು. ಚೆನ್ನಾಗಿಲ್ಲ ಎಂದು ಹೇಳುವವರು ಹುಚ್ಚರು.

○ ತಡಿಯಪ್ಪನ ರಾಣಿ ಬಸಪ್ಪ

ನಾನು ಬಂದಿಲ್ಲ. ಮನೆಯವರನ್ನು ಕಳುಹಿಸಿದ್ದೆ ಕಾರ್ಯಕ್ರಮ ಚೆನ್ನಾಗಿತ್ತೂಂತ ಹೇಳಿದರು.

○ ಕೊಡೆಕಲ್ಲು ವಸಂತ

ಬೆಳಗಿನ ಕಾರ್ಯಕ್ರಮ ಚೆನ್ನಾಗಿತ್ತು. ಸಾಂಸ್ಕೃತಿಕ ಕಾರ್ಯಕ್ರಮ ಸ್ವಲ್ಪ ಬೋರಾಯಿತು.

○ ಭಾಗೀರಥಿ ದಂಬೆಕೋಡಿ ಮೈಸೂರು

---

[13ನೇ ಪುಟದಿಂದ]

ನಗರದಲ್ಲಿ ಓದಿದ ಮಕ್ಕಳೊಡನೆ ಸ್ಪರ್ಧಿಸಲು ಸಾಧ್ಯವಿಲ್ಲ. ಆದ್ದರಿಂದ ಇವರು ಹಿಂದುಳಿದ ವರ್ಗದ ಸರ್ಟಿಫಿಕೇಟ್ ಪಡೆಯಲೇಬೇಕು.

ಆದ್ದರಿಂದ ಕೊಡಗಿನ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಸಂಘ-ಸಂಸ್ಥೆಗಳು ಜಾಗರೂಕತೆ ವಹಿಸಿ ಆಯೋಗದವರನ್ನು ತಕ್ಕ ಮಾಹಿತಿಯೊಂದಿಗೆ ಚರ್ಚಿಸಿ "GOWDA" ಎಂಬ ಶಬ್ದವನ್ನು ಹಿಂದುಳಿದ ವಂಗಡಗಳ ಪಟ್ಟಿಯಲ್ಲಿ ಸೇರಿಸುವ ಹಾಗೆ ಮಾಡಬೇಕು.

ಈ ವಿಷಯವನ್ನು ಜನಾಂಗದವರೆಲ್ಲರೂ ತಿಳಿಯಲಿ ಎಂಬ ಅಭಿಪ್ರಾಯದಿಂದ ಈ ಲೇಖನವನ್ನು ಬರೆದಿದ್ದೇನೆ.

○ ಪ್ರೊ॥ ಪೂಜಾರಿ ಮೊಣ್ಣಪ್ಪ

# ದಿನಾಂಕ 12-4-98ರಲ್ಲಿ ಜರುಗಿದ ಅರೆಭಾಷಿಕ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ತಗುಲಿದ ಆಯವ್ಯಯ ಪಟ್ಟಿ

| ಜಮಾ | ರೂ. | ಪೈ | ಖರ್ಚುಗಳು | ರೂ. | ಪೈ. |
|---|---|---|---|---|---|
| ದಾನಿಗಳಿಂದ ಚಂದಾ ಮೂಲಕ ಸಂಗ್ರಹವಾದ ಹಣ | 49.712 | 00 | ಕಲಾಮಂದಿರದ, ಆಮಂತ್ರಣ ಪತ್ರಿಕೆ, ಅಂಚೆ ವೆಚ್ಚ, ಅಲಂಕಾರ ಸಾಮಗ್ರಿಗಳು, ಬ್ಯಾನರ್, ಸ್ಮರಣಿಕೆ, ಮುದ್ರಣಕ್ಕೆ, ಶಾಮಿಯಾನ ಕೆಲಸದವರಿಗೆ, ಚಿತ್ರೀಕರಣಕ್ಕೆ, ಸಾಗಾಣಿಕೆಗೆ ಹಾಗೂ ಇನ್ನಿತರ ಚಿಕ್ಕಪುಟ್ಟ ಖರ್ಚು – | 15,428 | 00 |
| | | | ಊಟದ ವ್ಯವಸ್ಥೆಗೆ ಖರ್ಚಾಗಿದ್ದು – | 9799 | 00 |
| | | | ಪತ್ರಿಕೆಯ ಜಾಹೀರಾತಿಗೆ – | 24,485 | 00 |
| ಮೊತ್ತ | 49,712 | 00 | ಮೊತ್ತ | 49,712 | 00 |

**ತಡಿಯಪ್ಪನ ಕುಮಾರಜಯ**

ಅಧ್ಯಕ್ಷರು, ಅರೆಭಾಷಿಕ ಸಾಂಸ್ಕೃತಿಕ ಸಮಿತಿ, ಮೈಸೂರು



**ಶ್ರೀ ಗುರಲಿಂಗೇಗೌಡರು**
S/o ಚೌಡೇಗೌಡ ಅ॥ ಕುಳ್ಳೇಗೌಡ ಭಾರೀ ಜಮೀನ್ದಾರರು, ಸಮಾಜಸೇವಕರು ಮಾಲೀಕರು : ಶ್ರೀ ಚೌಡೇಶ್ವರಿ ರೈಸ್ ಮಿಲ್, ಶ್ರೀ ಚೌಡೇಶ್ವರಿ ಸಾ. ಮಿಲ್



**ಶ್ರೀ ಕೆ. ಸಿದ್ದೇಗೌಡರು,**
S/o ಕೆಂಪೇಗೌಡರು, ಗ್ರಾಮದ ಊರು ಗೌಡರು ಜಮೀನ್ದಾರರು. ಸಮಾಜ ಸೇವಕರು, ಮಾಜಿ ತಾ॥ ಬೋರ್ಡ್ ಸದಸ್ಯರು



**ಶ್ರೀ ಶಿವರಾಮೇಗೌಡರು**
S/o ಪಟೇಲ್ ಸಿದ್ದೇಗೌಡ, ಸಮಾಜ ಸೇವಕರು. ಅಧ್ಯಕ್ಷರು **Ex VSSN**

ಮತ್ತು **ಶ್ರೀ ಸುಭಾಷ್‌ಬಾಬು** S/o ರಾಮು ಯುವ ನಾಯಕರು, ಮಹದೇವಪುರ ಗ್ರಾಮ

ದಿನಾಂಕ 12-4-1998ರಲ್ಲಿ ಮೈಸೂರಿನ ಕಲಾಮಂದಿರದಲ್ಲಿ ನಡೆದ ಕೊಡಗು ಸಂಗಾತಿ ಪತ್ರಿಕೆಯ ವಾರ್ಷಿಕೋತ್ಸವ ಮತ್ತು ಅರೆಭಾಷಿಕ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಮಧ್ಯಾಹ್ನದ ಊಟದ ವ್ಯವಸ್ಥೆಗೆ ಸಹಕರಿಸಿದ ಮಂಡ್ಯ ಜಿಲ್ಲಾ, ಶ್ರೀರಂಗ ಪಟ್ಟಣ ತಾಲೂಕು ಮಹದೇವಪುರ ಗ್ರಾಮದ ಈ ಮೇಲ್ಕಾಣಿಸಿದ ಇವರಿಗೂ ಮತ್ತು ಗ್ರಾಮಸ್ಥರಿಗೂ ಪತ್ರಿಕಾ ಪರವಾಗಿಯೂ ಅರೆಭಾಷಿಕಾ ಸಾಂಸ್ಕೃತಿಕ ಸಮಿತಿ ಪರವಾಗಿಯೂ ಹೃತ್ಪೂರ್ವಕ ವಂದನೆಗಳು

—ಸಂಪಾದಕಿ
**ಪಟ್ಟಡ ಶೀಲಾಮಣಿ**

---

## ಕನ್ನಡ ಸಾಹಿತ್ಯ ಸಾರಸ್ವತ ಲೋಕಕ್ಕೆ ನಮ್ಮವರ ಕೊಡುಗೆ
## "ಯಾರ ಬೇಟೆ ಮತ್ತು ಇತರ ಪ್ರಸಂಗಗಳು"
## ಪುಸ್ತಕನ

**ಶ್ರೀ ಬಿ.ಆರ್. ಜೋಯಪ್ಪ,** ಉಪನ್ಯಾಸಕರು, ಮದೆ ಅಂಚೆ, ಕೊಡಗು-571 201

ಇವು ಬರ್ದೊಳೊ. ಇವು ನಮ್ಮ ಕೊಡಗು ಸಂಗಾತಿ ಪತ್ರಿಕೆಯ ಅರೆಭಾಷಿಕ ವಿಭಾಗಕ್ಕೆ ಖಾಯಂ ಆಗಿ ಬರಿತಾ ಒಳೊ. ಇವರ ಈ ಚೊಚ್ಚಲ ಕೃತಿ ನಮ್ಮ ಮಲೆನಾಡಿನ ಪ್ರತಿಯೊಬ್ಬರ ಮನಸೂರೆಗೊಳ್ಳುವ, ಭಾರಿ ಲಾಯಕ್ಕಾದ ಪೊರ್ಲಾದ ಕಥೆ ಮತ್ತೆ ನಾವೆಲ್ಲ ಓದಕ್ಕಾದ ಪುಸ್ತಕ. ಇದ್ ನಮ್ಮ ಮಡಿಕೇರಿ ಶಾಖೆಲಿ ಸ ಸಿಕ್ಕಿದೆ.

—ಸಂಪಾದಕಿ

ಅರೆಭಾಷಿಕ ವಿಭಾಗ

# ಕರಿ ಚೆನ್ನ

## ಧಾರವಾಹಿ - 4

ಮೂಲಕಥೆ : ಅಶ್ವಥಿ ಅರವಿಂದ್
ಅರೆಭಾಷೆಗೆ : ಎಂ.ಇ. ಮುಹಮ್ಮದ್

**ಕಳೆದ ಸಂಚಿಕೆಯಲ್ಲಿ....**

**ಮಳೆ ಜೋರಾಗಿ ಹೊಡಿತಾ ಇದ್ದದೆ. ರೋಡ್ ಪೂರಾ ನೀರ್ ಹರ್ದ್ ತೋಡುನಂಗೆ ಆವುಟು. ಈ ಗಾಳಿಗೆ ಮರ ಬಿದ್ದರೆಂತೇಳಿ ಸ್ವಲ್ಪ ಹೊತ್ತು ಕಾರ್ ನಿಲ್ಸಿದೆ. ಮೀರಂಗೆ ಧೈರ್ಯ ಕೆಟ್ಟ್ ಹೋವ್ತು. ಸ್ವಲ್ಪ ಹೊತ್ತ್‌ನ ಮ್ಯಾಲೆ ಕಾರ್ ಸ್ಪೀಡ್‌ಲಿ ಹೊರಟೆದೆ. ಒಮ್ಮೆಗೆ ಬ್ರೇಕ್ ಹಾಕಿ ಕಾರ್ ನಿಲ್ಸಿಕಾಕನ ಕೈಲಿದ್ದ ಪುಸ್ತಕ ಕೆಳಗೆ ಬಿದ್ದದೆ. ಅದರ ಹೆಕ್ಕಿಕೆ ಬಗ್ಗ್‌ಕಾಕನ ದೇವಯ್ಯ ಅವಳ ಸುಂದರ ಮೈನ ಅನುಭವಿಸಿಕೆ ನೋಡ್ದೆ. ಹೆಂಗೋ ಕಾರ್‌ನ ತಂದ್ ಅವಳ ಮನೆ ಹತ್ರ ನಿಲ್ಸಿದೆ.ಕಾರ್ ಇಳ್ದ್ ಬದುಕಿದೆ ಬಡಜೀವಂತೇಳಿ ಮನೆಗೆ ಓಡಿಬಂದ್ ಅಕ್ಕನತ್ರ ವಿಷ್ಯ ಹೇಳ್‌ಕಾಕನ ಇಬ್ಬರಿಗೂ ದೇವಯ್ಯನ ವಿಷಯಲಿ ಜಗಳ ಹತ್ತಿಕಂಡದೆ**

**ಮುಂದೆ ಓದಿ....**

"ಅಕ್ಕಾ ಪೊಪ್ಪ ಎಲ್ಲಿ? "
ಮೀರ ಕೇಳ್ತ್.
"ನಿನ್ನ ಹುಡ್ಕಿಕಂಡ್ ಹೋತ್".
ಸಿಟ್ಟ್‌ನ ಅದ್‌ಮಿಕಂಡೇ ಗೌರ ಹೇಳ್ತ್.
"ಹೇಳಿ ಎಂತ ಪ್ರಯೋಜನ ಹೇಳ್. ಆ ಪರ್ಪೋಶಿ ದೇವಯ್ಯ ನೆಟ್ಟಂಗೆ ದಾರಿನ ಬುಟ್ಟ್ ಒಂದ್ ಸುತ್ತ್ ಬಳ್ಸಿಕಂಡ್ ಕಾರ್ ಬುಟ್ಟದರ್‌ಂದ ಇಷ್ಟ್ ಹೊತ್ತಾತ್. ಆ ನೆಟ್ಟಂಗೆ ದಾರಿಲಿ ಬಂದಿದ್ರೆ ನಂಗೆ ಪೊಪ್ಪನ ಕಾಂಬಕೆ ಸಿಕ್ತಿತ್ತ್. ಪಾಪ ಪೊಪ್ಪ ಬಸ್‌ಸ್ಟಾಪ್‌ವರೆಗೆ ಸುಮ್ಮನೆ ನಡಿಯಕಾತ್".

"ಹೌದ್‌ನೇ, ಬಾಕಿ ಇರ್‌ವರ ಕಷ್ಟ ತಿಳಿವಷ್ಟ್ ತಲೆ ಬೇಕಲ್ಲ ನಿಂಗೆ. ಅಕ್ಕನಕ್ಕಲೆ ಎಂತ ಹೇಳೊಕು, ಪೊಪ್ಪನೊಟ್ಟಿಗೆ ಹೆಂಗೆ ಮಾತಾಡಕೂಂತ ನಿಂಗೆ ಗೊತ್ತಿದ್ರೆ ತಾನೆ?" ಹಿಂಗೇಂತ ಗೌರ ಹೇಳ್ತ್.

"ಆ ದೇವಯ್ಯನ ಬುದ್ಧಿನ ಇಂದ್ ನಾನ್ ಸರಿಯಾಗಿ ತಿಳ್ದಿ. ಅವನ ಕೈಂದ ನಾನ್ ಬಚಾವಾಗಿ ಬಂದದ್ ಒಂದ್ ದೊಡ್ಡ ವಿಸ್ಯ. ಆ ನಾಲಾಯಕ್ಕನ ಮಜನ ನೀನ್ ದೂರ ಮಾಡುದೇ ಒಳ್ಳೇದ್‌ಂತ ನಂಗೆ ಕಂಡದೆ".

ಮೀರ ಕಡ್ಡಿ ತುಂಡ್ ಮಾಡ್ದಂಗೆ ಹೇಳ್ತ್.

ಅದ್ ನೀನ್ ಹೇಳೊಕೂಂತ ಇಲ್ಲೆ. ಅದ್ನ ನಾನ್ ತೀರ್ಮಾನ ಮಾಡ್ನೆ. ನಿನ್ನಂಗೆ ಕಾಲೇಜ್ ಮೆಟ್ಲ್ ಹತ್ತದೇ ಹೋದ್ರೂ ಒಳ್ಳೆದ್ ಕೆಟ್ಟದ್ ಯಾವೂ ದೂಂತ ತಿಳ್ಕೊಳೊ ತಾಕತ್ ನಂಗುಟ್ಟುತ ಗೌರ ಹೇಳ್ತ್

"ಸರಿ ಸರಿ. ಸಮಯ ಬಾಕನ ನಿನ್ನ ತಾಕತ್ತ್ ನಿಂಗೇ ಗೊತ್ತಾದೆ ನಂಗೇನ್.

ಸೊಲ್ಪ ಹೊತ್ತ್‌ಗೆ ಹೊರ್ಗೆ ಕೊಡೆ ಮೊಡ್ಸ್ಚದು ಸದ್ದ್ ಕೇಳ್ತ್. ಪೊಪ್ಪ ಬಾತ್‌ಂತ ಹೇಳಿಕಂಡ್ ಮೀರ ಹೋಗಿ ಬಾಗ್‌ಲ್ ತೆಗ್ತ್.

ಕೆಡಿಕೆ ಆಗಿದ್ದ ಒಲೆಗೆ ನೌದೆ ತುರ್ಕಿ ಗೌರ ರಂಜನ್‌ನ ಗ್ಯಾನಲಿ ಮುಳ್ಗಿತ್.

* * * *

ಗೌರ ರಂಜನ್‌ನ ತನ್ನ ಎದೆಯಾಳಲಿ ಪ್ರೀತಿಸ್‌ತಿತ್ತ್. ರಂಜನ್‌ಗಾಗಿ ಪ್ರಾಣ ಕೊಡಿಕೂ ಅವಳು ರೆಡಿ ಇತ್ತ್. ಅವನ ಮ್ಯಾಲೆ ಇದ್ದ ಪ್ರೀತಿನ ಬ್ರಾಂತ್‌ಲಿ ಗೌರ ತನ್ನಲ್ಲಿದ್ದದ್‌ನೆಲ್ಲ ಅವಂಗೆ ಅರ್ಪಿಸಿ ಆಗಿ ಬುಟ್ಟಿತ್ತ್
ಮೋಡ ಕರಗಿದ ನೀಲ ಆಕಾಶಲಿ ತುಂಬ ನಕ್ಷತ್ರಗ ಇದ್ದೊ. ಆ ಬೆಳದಿಂಗಳ ರಾತ್ರಿ ಗೌರ ಮತ್ತೆ ರಂಜನ್ ಪರಸ್ಪರ ತಬ್ಬಿಕಂಡ್ ಕುದ್ದೊ.

ರಂಜನ್ ತನ್‌ಗೆ ತೃಪ್ತಿ ಆಗೋಷ್ಟ ಅವಳ್ನ ಅನುಭವಿಸ್ತ್. ಅವಳ ಕಣ್ಣ್ ಮೂಗು, ಹಣೆ, ಕುತ್ತಿಗೆ ಕಿವಿಗೆಲ್ಲ ಅವನ ತುಟಿಯು ಅಚ್ಚ್ ಬಿತ್ತಿತ್.

ಅವನ ಪ್ರೀತಿಯ ಆಟಕೆ ಅವ್ಳು ಮಂಕಾಗಿ ಹೋತ್.ಆ ತಂಪು ಬೆಳದಿಂಗಳಲಿ ಉಕ್ಕಿ ಬಂದ ಬೆವರ್‌ನ ಸೀರೆ ಸೆರಗ್‌ಂದ ಒರ್ಸಿಕಂಡ್ ಗೌರ ರಂಜನ್‌ನ ಗುಂಗುರು ಕೂದಲ ಸೆರೆಗೆ ತನ್ನ ಬೆರಳ್‌ನ ಸೇರ್ಸಿಕಂಡ್ ಅವನ ಕರ್ತ್.

"ರಂಜನ್"

"ಹ್ಞಾಂ ?"

"ನಂಗೆ ಮೋಸ ಮಾಡ್‌ದುಲೆಲ್ಲಾ ?"

"ಛೇ ಎಂತ ಹೇಳ್ತ ಒಳ ಗೌರ. ನಿಂಗೆ ಮೋಸ ಮಾಡುದಾ ? ನನ್ನ ಈ ಚಿನ್ನದ ಗಟ್ಟಿಗೆ ನಾನ್ ಮೋಸ ಮಾಡ್ದು? ನಿನ್ನ ಬುಟ್ಟರೆ ನಂಗೆ ಬಾಳೇ ಇಲ್ಲೆ ಗೌರ".
ಮತ್ತೊಮ್ಮೆ ಇಬ್ಬರ ತುಟಿ ಒಂದಾತ್. ಅರೆನಿದ್ದೆಯ ಮಸ್ತ್‌ಲಿ ಅವಳಲ್ಲಿ ಕಂಡತ್. ಗೌರ ಆ ಮಸ್ತ್ ಒಮ್ಮೆ ಸಣ್ಣಗೆ ತುಟಿ ಅರಳಿಸ್ತ್. ಹಿಂಗೆ ಐದಾರ್ ಅಮಾಸೆ ಹುಣ್ಣಿಮೆ ಕಳ್ದೊ.

ಈಗ ರಂಜನ್ ಮೋಸಗಾರಂತ ಹೇಳಿಕೆ ಗೌರ ತಯಾರಿಲ್ಲೆ. ರಂಜನ್ ತನ್ನ ಕೈಬಿಟ್ಟ್_

ನಡ್ಸಂವ. ಊಟ–ಉಡುಗೆ ಕೊಡಬೇಕಾದಂವ.

ಗೌರಂಗೆ ರಂಜನ್ ಒಂದ್ ಪ್ರತ್ಯಕ್ಷ ದೇವರೇ ಆಗಿತ್ತ್. ಹಂಗಾಗಿ ಅವಳಿಗೆ ಬೋರುಗುಡ್ಡೆ ದೇವಯ್ಯನ ಮೇಲೆ ಅಷ್ಟ್ ಗೌರವ.

ಅಂದ್ರಿಂದಲೇ ರಂಜನ್‌ನ ಡ್ಯಾಡಿನ ಮೀರ ಬೊಡ್ಡಿ ಮುಜಾಂತ ಕರ್‌ದವ್ ಗೌರಂಗೆ ಸರಿ ಕಂಡತ್‌ಲೆ.

ರಾತ್ರಿ ಎಲ್ಲವು ಉಂಬಕೆ ಕುದ್ದ್‌ಕಂಡ್ ಇರ್‌ಕ್ನನ ಮಾದಪ್ಪ ಕೇಳ್ತ್.

"ಗೌರ ಯಾಕನ್ನ ಒಂದ್ ತರಾ ಒಳಾ ? ಮೊಂಕಾಗಿ ಕಂಡದೆ, ಏನಾತ್?"

"ಇಲ್ಲೆ ಪೊಪ್ಪ, ನಂಗೆ ಎನೂ ಆತ್‌ಲೆ, ಲಾಯ್ಕಾಗಿಯೇ ಒಳೆಅಲಾ"

ಗೌರ ನಗಾಡಿಕೆ ಪೇಚಾಡ್ತ್.

"ನಿಂಗೆ ಯಾವುದರೊಂದ್ ನೆಂಟಸ್ತಿಕೆ ಕೂಡಿ ಬಂದಿದ್ದರೆ ನನ್ನ ಮನಸಿಗೆ ಸೊಲ್ಪ ನೆಮ್ಮದಿ ಆಗ್‌ತಿತ್ತ್. ಹಿಂದೆ ಬೋರ್‌ಗುಡ್ಡೆ ಜನರ ಬೇಕಷ್ಟ್ ಹಣ ನೆಂಟಸ್ತಿಕೆ ಮಾಡಿಕೆ ಎಷ್ಟ್ ಬೇಕಾದ್ರೂ ಬ್ರೋಕರ್‌ಗಳಿದ್ದೊ. ಈಗ ಪಾಡ್ ನೋಡು. ನಾನೇ ಹುಡುಕಿ ಕಂಡ್ ಹೋಕು. ಒಂದ್ ಚಾಕ್ರಿಯಂವ ಸಿಕ್ಕಿರೆ ಎಲ್ಲಕೂ ಒಳ್ಳೆದಿತ್ತ್." ಮಾದಪ್ಪ ಹೇಳ್ತ್.

"ಓ...... ಚಾಕ್ರಿಯಂವಂಗೆ ಕೊಡೊಕು ಈಗ ಏನತ್ ಸಾವ್ರ. ಅಕ್ಕಂಗೆ ಒಬ್ಬ ಲಕ್ಷಾಧೀಶ್ವರ ಸಿಕ್ಕೊಕೂಂತ ನನ್ನ ಆಸೆ. ಬೋ ರು ಗು ಡ್ಡೆ ದೇ ವ ಯ್ಯ ನಂ ತ ಸಾಹುಕಾರನ ಮಜಾ !"

ಮೀರ ಮಧ್ಯ ಬಾಯಿಹಾಕಿತ್.

ಮಾದಪ್ಪಂಗೆ ಸಿಟ್ಟ್ ಬಾತ್.

"ನೋಡ್ ನಿನ್ನ...... ಎಂಜಲ್ ಕೈಯಂತ ನೋಡದೆ ನಿನ್ನ ಮುಸುಂಡಿಗೆ ಕೊಟ್ನೆ. ಎರಡ್ ವರ್ಷದ ವ್ಯತ್ಯಾಸ ಇದ್ರೂ ಗೌರ ನಿನ್ನ ಅಕ್ಕ್ಯಾಂತೇಳೊ ಗ್ಯಾನ ಇಲ್ಲೆ."

ಅಷ್ಟ್ ಹೇಳಿ ಮಾದಪ್ಪ ಉಂಡ್ ಮುಗ್ಸಿಕೈಕೊಳ್ದ್ ಎದ್ದತ್.

ಸಿಟ್ಟ್‌ನ ನುಂಗಿಕಂಡ್‌ಕುದ್ದಿದ್ದ ಗೌರನ ಭುಜದ ಮೇಲೆ ತನ್ನ ಎರಡ್ ಕೈನ ಇಟ್ಟ್ ಬೊಗ್ಗಿಕಂಡ್ ಅಕ್ಕನ ನೋಡ್‌ದ ಮೀರ ಅವಳ ಭುಜನ ಅಲುಗಾಡಿಸಿ ಒಮ್ಮೆ ಕಣ್ಣ್‌ಹೊಡ್ತ್.

(ಸಶೇಷ)

---

## ಉದ್ಯೋಗ ವಾರ್ತೆ

### ಸೈನಿಕರ ನೇಮಕ

ಬೆಂಗಳೂರು, ಬಳ್ಳಾರಿ, ದಾವಣಗೆರೆ, ಚಿತ್ರದುರ್ಗ, ತುಮಕೂರು, ಮಂಡ್ಯ, ಕೋಲಾರ, ಮೈಸೂರು ಮತ್ತು ಚಾಮರಾಜನಗರದ ಅಭ್ಯರ್ಥಿಗಳಿಗಾಗಿ ಮೇ 26 ಮತ್ತು 27ರಂದು ಸೈನಿಕರ ನೇಮಕಾತಿ ಕಾರ್ಯ ನಡೆಯಲಿದೆ. ಬೆಂಗಳೂರಿನ ಮಾಣಿಕ್ ಷಾ ಪರೇಡ್ ಮೈದಾನದಲ್ಲಿ ಬೆಳಿಗ್ಗೆ 7 ಗಂಟೆಯಿಂದ ನಡೆಯಲಿರುವ ನೇಮಕದಲ್ಲಿ ಎಸ್ಸೆಸ್ಸೆಲ್ಸಿ ಪಾಸಾದ 16ರಿಂದ23 ವರ್ಷ ವಯೋಮಿತಿಯ ಅಭ್ಯರ್ಥಿಗಳು ಭಾಗವಹಿಸಲು ಅರ್ಹರು.

ಇದೇ ಸಂದರ್ಭದಲ್ಲಿ ಸೇನೆಯಲ್ಲಿ ಜವಾನ, ಕ್ಷೌರಿಕ, ಧೋಬಿ, ಮುಂತಾದ ಹುದ್ದೆಗಳಿಗೂ ಆಯ್ಕೆ ನಡೆಯಲಿದ್ದು, ಇದರಲ್ಲಿ ಎಸ್ಸೆಸ್ಸೆಲ್ಸಿ ಅನುತ್ತೀರ್ಣರಾದವರೂ ಭಾಗವಹಿಸಬಹುದು ಎಂದು ಭಾರತೀಯ ಸೇನೆ ಪ್ರಕಟಣೆ ತಿಳಿಸಿದೆ.

---

## ನ ಗೆ ಹ ನಿ

### ಫೆವಿಕಾಲ್ ಕಾ ಮಜಬೂತ್ ಜೋಡ್

ಒಂದ್ ಊರ್‌ಲಿ ಒಂದ್ ಗೂಡೆ ಇತ್ತ್. ಅವ್ಳ ನೋಡಿಕೆ ಲಾಯ್ಕ ಇದ್ದರೂ ಕೂಡ, ಅವಳ ತಲೇಲಿ ಕೂದಲ್ ಇಲ್ಲದ ಕಾರಣ ಅವಳ್‌ನ ಮೊದುವೆ ಆಕೆ ಯಾರೂ ಒಪ್ಪುತ್ತಿತ್ತ್‌ಲೆ. ಕೊನೆಗೆ ಅವ್‌ಳಿಗೆ ಒಂದ್ ಉಪಾಯ ಹೊಳ್ತ್. ಅವ್‌ಳು ಪ್ಯಾಟೆಗೆ ಹೋಗಿ ಉದ್ದಕೂದಲ್‌ನ ಒಂದ ವಿಗ್ ತಂದದೆ. ಅದರ್ನ ಫೆವಿಕಾಲ್ ಹಾಕಿ ತಲೆಗ್ ಗ್ಲಾಯ್‌ಕ ಅಂಟಿಸಿಕಂಡ್ದೆ. ಮತ್ತೆ ಒಂದ್ ದಿನ ಅವಳ ಮೊದುವೆ ಆತ್. ಅವಳ ಅತ್ತೆ ತುಂಬಾ ಘಾಟಿ. ಯಾಗೋಳು ಡೌರಿ ತಕಬಾತ ಪೀಡಸ್‌ತ್ತಿತ್ತ್. ಸೊಸೆನೋ ನಾ ತಾದುಲೆ ಏನ್ ಮಾಡಿಯಾತ ಜೋರ್ ಹಾಕ್‌ತಿತ್ತ್. ಜಗಳ ಆಡಿ ಆಡಿ ಕಡೆಗೆ ಅತ್ತೆಗೆ ಸಿಟ್ಟ್ ಬಂದ್ ಆನ್ನ ಜುಟ್ಟ್ ಹಿಡ್‌ಕಂಡ್ ಎಳದದೆ. ಆಗ ಸೊಸೆ ನೆಗಾಡಿಕಂಡ್ ಹೇಳ್ದೆ, "ಲಗಾವೋ ಲಗಾವೋ ಔರ್ ಜೋರ್‌ಸೆ ಲಗಾವೋ, ಏ ಫೆವಿಕಾಲ್ ಕಾ ಮಜ್‌ಬೂತ್ ಜೋಡ್ ಹೈ, ಟೂಟೆಗಾ ನಹಿ" [ಎಳೆಯಿರಿ ಎಳೆಯಿರಿ ಇನ್ನು ಜೋರಾಗಿ ಎಳೆಯಿರಿ, ಇದು ಫೆವಿಕಾಲ್‌ನ ಗಟ್ಟಿಯಾದ ಜೋಡಣೆ, ತುಂಡಾಗದು]

○ ಅಚ್ಚಲ್ಪಾಡಿ ಬೀನಾ ಗೋಪಾಲ
ಮಡಿಕೇರಿ

# ರಾಜ್ಯಕ್ಕೆ 1ನೇ ಬಹುಮಾನ ತಕ್ಕಂಡ ನಡುಗಲ್ಲು ಹೊನ್ನಪ್ಪ ವಿದ್ಯಾ

● ನಿನ್ನ ಮನೆ, ಅಪ್ಪ, ಅಮ್ಮ, ಇವರ ಬಗ್ಗೆ ಹೇಳೀಯಾ ?

ನನ್ನ ಮನೆ ನಡುಗಲ್ಲು. ಅಪ್ಪ ಶ್ರೀ ಹೊನ್ನಪ್ಪ, ಅಮ್ಮ ಶ್ರೀಮತಿ ಕಾವೇರಮ್ಮ. ನನ್ನ ಊರು ಮಡಿನಾಡ್.

● ನೀ ಈಗ ಎಲ್ಲಿ ಮತ್ತೆ ಯಾವ ಕ್ಲಾಸ್‌ಲಿ ಓದ್ತಾ ಒಳ ?

ನಾನ್ ಈಗ ಮಡಿನಾಡ್‌ಲಿ ಮಡೆಮಹೇಶ್ವರ ಪ. ಪೂ. ಕಾಲೇಜ್‌ಲಿ 1ನೇ ಪಿ.ಯು.ಸಿ. ಓದ್ತಾ ಒಳೆ.

● ನಿನ್ನ ಅಣ್ಣ, ತಮ್ಮ ಇವು ಎನ್ ಮಾಡ್ತಾ ಒಳೊ ?

ಅಣ್ಣ 1ನೇ ವರ್ಷದ ಬಿ.ಎ. ಪದವಿ ಓದ್ತಾ ಉಟ್ಟ. ಅವನ ಹೆಸ್ರ್ ವಿಶು, ತಮ್ಮ 9ನೇ ಕ್ಲಾಸ್‌ಲಿ ಓದ್ತಾ ಉಟ್ಟ. ಅವನ ಹೆಸ್ರ್ ವಿಕ್ಕಿ. ಇನ್ನೊಬ್ಬ ತಮ್ಮ ವಿಘು, ಅಂವ 3ನೇ ಕ್ಲಾಸ್‌ಲಿ ಓದಿದ.

● ನಿನ್ನ ಹವ್ಯಾಸ ಯಂಥಾ ?

ಸಾಮಾಜಿಕ ಕಥೆ ಅಲ್ಲ ಕಾದಂಬರಿ ಓದಿನೆ. ಕೆಲವೊಮ್ಮೆ ಚಿತ್ರ ಸಾ ಬರ್ದನೆ.

● ನಿಂಗೆ ಈಗ ತುಂಬಾ ಇಷ್ಟ ಯಾವು ವಲಿ ?

ಭಾಷಣಲಿ.

● ನೀನ್ ಸುರೂಲಿ ಭಾಷಣ ಮಾಡ್ದ್ದ್ ಎಲ್ಲಿ, ಅದೆಲ್ಲಿ? ಆಗ ನಿಂಗೆ ಬಹುಮಾನ ಸಿಕ್ಕಿತಾ ?

ನಾ ಸುರೂಲಿ ಸ್ಪರ್ಧೆಗೆ ಹೋದ್ ಚೆಂಬು ಶಾಲೆಗೆ. ಅಲ್ಲಿ ಜೂನಿಯರ್ ಕಾಲೇಜ್‌ಲಿ ಸ್ಪರ್ಧೆ ಇತ್ತ್. ಅಗ ನಂಗೆ ಎರಡನೇ ಬಹುಮಾನ ಬಾತ್.

● ನಿಂಗೆ ಎರಡನೆ ಬಹುಮಾನ ಬಾಕನ ನಿನ್ನ ಮನಸ್ಸ್‌ಗೆ ಏನಾತ್ ?

ನಾನ್ ಇನ್ನೊಮ್ಮೆ ಮಾತ್ರ 1ನೇ ಬಹುಮಾನ ತಕ್ಕಂಡೇ ತಕಂಬೊಕುಂತ ಆತ್.

● ನೀನ್ ಈಗ ಭಾಷಣ ಕಲಿನ ಮುಂದಕ್ಕೂ ತಕ್ಕೊಂಡೋಕುಂತಾ ಒಳ್ಲ, ಆಗ ನಿಂಗೆ ಮಾದರಿ ಯಾರ್?

ನಂಗೆ ಮಾದರಿ ಹಿರಿಯವಳಾಗಿರುವ ಗೆಳತಿ ಅಪರ್ಣಾ ಹುಲಿತಾಳಂತ ಅವ್ಳ ಭಾಷಣ ಕೇಳೊಕು. ಅಬ್ಬಬ್ಬಾ ಅದೆಂಥಾ ಭಾಷಣ ! ನಾನೂ ಸಾ ಹಂಗೇ ಭಾಷಣ ಮಾಡಕುಂತ ಆಸೆ ಇಸಿಕಂಡೆ.



ನಡುಗಲ್ಲು ಹೊನ್ನಪ್ಪ ವಿದ್ಯಾ

● ನೀನ್ ಸ್ಪರ್ಧೆಗೆಂತ ಅತೀ ದೂರಕ್ಕೆ ಎಲ್ಲಿಗೆ ಹೋಗಿದ್ದೊ? ಅಲ್ಲಿ ಬಹುಮಾನ ಸಿಕ್ಕಿತಾ ?

ನಾನ್ ಬೆಂಗಳೂರಿಗೆ ರಾಜ್ಯ ಮಟ್ಟದ ಸ್ಪರ್ಧೆಗೆ ಹೋಗಿದ್ದೆ. ಅಲ್ಲಿ ನಂಗೆ 1ನೇ ಬಹುಮಾನ ಬಾತ್.

● ನಿಂಗೆ ಎಲ್ಲಾ ಬಹುಮಾನ ಸೇರಿ ಈ ವರ್ಷ ಹಣದ ರುಪಾಯಿಲಿ ಎಷ್ಟ್ ದುಡ್ಡ್ ಸಿಕ್ಕಿತ್ ?

ಸುಮಾರಾಗಿ ಎರಡ್ ಸಾವಿರ ರುಪಾಯಿ ಮತ್ತೇ ಸರ್ಟಿಫಿಕೇಟ್.

● ನಿಂಗೆ ಮನೆಯವು ಮತ್ತೆ ಗುರುಗ ಹೇಂಗೆ ಪ್ರೋತ್ಸಾಹ ಕೊಟ್ಟವೆ ?

ನಂಗೆ ಮನೆಯವರ ಮತ್ತೆ ಗುರುಗಳ ಪ್ರೋತ್ಸಾಹ ಇಲ್ಲದಿದ್ದರೆ ತಾಲ್ಲೂಕು ಮಟ್ಟ ಜಿಲ್ಲಾ ಮಟ್ಟ, ವಿಭಾಗ ಮಟ್ಟ ಮತ್ತೆ ರಾಜ್ಯ ಮಟ್ಟಲಿ ಬಹುಮಾನ ಬಾತಿಲ್ಲೆಂತ ಕಂಡದೆ. ನಾನ್ ಭಾಷಣನ ಕಲ್ತಿಲ್ಲಾ ಆದ ಮೇಲೆ ಅಪ್ಪ, ಅಮ್ಮ "ಎಲ್ಲಿಯುವಾ, ನೀ ಕಲ್ತ ಭಾಷಣನ ಒಮ್ಮೆ ಹೇಳ್ ನೋಡನೋಂತ ಹೇಳ್ತಿದ್ದೊ. ಆಗ ಅಣ್ಣ ತಮ್ಮಂದರ್, ಅತ್ತೆ, ಅಪ್ಪ, ಅಮ್ಮ ಎಲ್ಲಾ ನಾಜ್ ನೋಡಿಕಂಡ್ ಕುದ್ದ್ ಕಣ್ತಿದ್ದೊ. ನಾನ್ ಯಾವ ಹೆದರಿಕೆನೂ ಇಲ್ಲದೆ ಭಾಷಣ ಸುರು ಮಾಡಿನೆ. ಎಲ್ಲಾ ಆದ ಮೇಲೆ "ನೀ ಸೊಲ್ಪ ನಿಧಾನ ಹೇಳವ್ವ, ಆರ್ ನಿಮಿಷ ಭಾಷಣ ಮಾಡ್ದ. ಸೊಲ್ಪ ಸಾಲ್‌ಗಳ ತೆಗೀಂತ ಹೇಳ್‌ವೆ. ಮತ್ತೆ ಕೆಲವು ಸಾಲ್‌ಗಳ ಕಟ್ ಮಾಡಿ ಹೇಳಿನೆ. ಆಗ ಸರಿಯಾದೆ.

● ನೀನ್ ಮುಂದೆ ಏನಾಕುಂತ ಒಳಾ?

ಮುಂದೆ ನಾನ್ ರಾಜ್ಯಶಾಸ್ತ್ರಲಿ ಎಂ. ಎ. ಓದಿ ಕಾಲೇಜ್‌ಲಿ ಉಪನ್ಯಾಸಕಿ ಆಕೊಂತ ಒಳೆ.

● ನೀನ್ ಸಣ್ಣವಳಾಗಿರಕನ ಡಿ.ಸಿ. ಆಕೊಂತ ಹೇಳ್ತಿದ್ದಾಳ ಆಸೆ ಇಲ್ಲನಾ?

ಆ ಆಸೆನೂ ಉಟ್ಟ. ಇವರಡಲಿ ಯಾವುದಾರ್ ಒಂದಾರೂ ಆಗೇ ಆಕೊಂತ ಆಸೆಪಟ್ಟೊಳೆ.

ಆಗಲಿ, ನೀ ಏನ್ ಆಸೆ ಪಟ್ಟೊಳಾ ಹಂಗೇ ಆಗಲಿ. ನಿಂಗೆ ಶುಭಾಶಯ.

ಸಂದರ್ಶನ : ಬಿ. ಆರ್. ಜೋಯಪ್ಪ
ಚೆಂಬು

---

**ಗೌಡ ಸಂಸ್ಕೃತಿಯು ಉಳಿವಿಗಾಗಿ ಮದುವೆ ಶುಭ ಕಾರ್ಯಗಳಿಗೆ ಬಂದಾಗ ತಪ್ಪದೆ ಗೌಡರ ವೀರ ಉಡುಪಿನಲ್ಲಿ ಬನ್ನಿ**

**-ಪಟ್ಟಡ ಪ್ರಭಾಕರ**

## ಪಾಪು ಹೈದನ ಮದುವೆ

ಗಂಡಿ ಮನೆ ಪಾಪಣ್ಣಿ ಬಾವಂಗೆ ಮದುವೆ ಗಡ
ಊರವರ ಕರ್ದೊಳೋ ವೀಳ್ಯ ಕೊಟ್ಟ್ ಎಲ್ಲವ್ರುಂ ಹೋಕಡ
ಹಟಮಾಡ್ತ್ ಪಾಪು ಹೈದ ನಂಗೆ ಮದುವೆ ಬ್ಯಾಡತಾ
ಊರಿಗೆ ಗೊತ್ತ್ಟು ಪಾಪು ಹೈದ ಎಷ್ಟ್ ಗೂಡೆಗಳಿಗೆ ಲೈನ್
ಹೊಡ್ದುಟುತಾ
ಹಂಗೂ ಹಿಂಗೂ ವೀಳ್ಯ ಶಾಸ್ತ್ರ ಬ್ಯಾಗ ಮುಗ್ಸಿದೊ
ಊರು ಗೂಡೆಗ ನಿಟ್ಟ್ಸಿರಿಟ್ಟೋ ನಾವು ಬದ್ಕಿದೊ
ಅಪ್ಪ ಹೇಳ್ತಿದ್ದೊ ಮದುವಳಿಗೆನ ಕೈತೊಳ್ದ್ ಮುಟ್ಟೋಕಡ
ಪಾಪು ಹೇಳ್ತಿತ್ತ್ ಮದುವಳಿಗೆನ ತಂಗಿ ಸಕತ್ತ್ ಲಾಯ್ಕ್‌ಗಡ
ಮದುವೆ ಹತ್ರ ಬಾತ್‌ತೇಳಿ ಮನೆಯಮ್ಮ ಭಾರಿ ಓಡಾಟ
ಮನೆಗೆ ಬಂದ ನೆಂಟ್ರನ ಸುಧಾರ್ಸಿಕೆ ಭಾರೀ ಬಂಡಾಟ
ಹತ್ತ್ ಊರಿಗೆ ಹಂಚಿದೊ ಅವನ ಲಗ್ನ ಪತ್ರಿಕೆ
ವಾರಕ್ಕೆ ಮುಂದೆ ವಕ್ರಿಸಿದೋ ನೆಂಟ್ರಗ ಲಾಯ್ಕ್ ಮುಕ್ಕಿಕೆ
ಬಂದ ನೆಂಟ್ರಗ ಪಾಪುನ ಕೇಳ್ದೊ ಗೂಡೆ ಹ್ಯಾಂಗುಟ್ಟ್
ಪಾಪು ಹೇಳ್ತ್ "ಗೂಡೆಗಿಂತ ಗೂಡನ ತಂಗೆ ಭಾರೀ ಲಾಯ್ಕುಟ್ಟ್"
ಚಪ್ಪರದಡಿಲಿ ಗೂಡೆಗ ಪಾಪುಗೆ ಎಣ್ಣೆ ಅರಿಶಿನ ಶಾಸ್ತ್ರ ಮಾಡುವೆ
ಪಾಪುನ ಗೆಳೆಯರು ಹುಲ್ಲುಮುಂಡಲಿ ಕುದ್ದ್‌ಕಂಡ್ ಹೆಂಡ
ಹಿಗ್ಗುವೆ
ಕಚ್ಚಾಪಂಚೆ ತಲೆಗೆ ಪ್ಯಾಟ ಹಾಕಿ ಪಾಪಣ್ಣನ ಗುರ್ತೇ ಸಿಕ್ಕುಲೆ
ದೂರ ಕುದ್ದ ಗೂಡೆನ ಕರ್ತ್ ಪಾಪು "ಸುಟ್ಟದ್ ಬಾನೇ ಹಕ್ಕಲೇ"
ಪಾಯ್ಸ ತಿಂಬಕೆ ಮರ್ತ್ವೇ ಮಕ್ಕ ಆವರ್ದ್ ಭಾರೀ ಕಿರಿಕಿರಿ
ಅಜ್ಜಿಗ ಅಜ್ಜಂಗ ಹೊಡ್ದವೇ ಪಟ್ಟಾಂಗ ಕೇಳಿಕೆ ಪಿರಿಪಿರಿ
ಹೆಣ್ಣ್ ಇಳ್‌ಸ್ಕನ ಗೂಡೆ ತೌರವರ ತಬ್ಬಿಕಂಡ್ ಬುಕ್ಕಿ ಮರ್ಕತ್
ದಿಬ್ಬಣ ನೋಡಿಕೆ ಊರವು ತೀರ ಉಬ್ಬುಲು ಕರೆಲೀ ಬಂದಿದ್ದೋ
ವಾಲಗ ಸದ್ದಿಗೆ ನಿದ್ದೆಂದೆದ್ದ ಮಕ್ಕಳಿಗೆ ಅಯ್ಯಕ ಜಾಡ್ಸಿ ಒದ್ದೋ
ಊರವು ಸೇರಿ ಆರತಿ ಮಾಡಿ ಮದುಮಕ್ಕಳ ಒಳಗೆ ಕರ್ಕಂಡೋ
ಎಲ್ಲವು ಹೇಳ್ವ ಗೂಡೆನ ಪೊರ್ಲು ನೋಡಿಕೆ ಎರಡ್ ಕಣ್ಣ್
ಸಾಲ್ದ್ ತಾ
ಪಾಪಣ್ಣಿ ಬಾವಂಗೆ ಮಯತ್ರ ಒಂದೇ ಗ್ಯಾನ ಎಷ್ಟೊತ್ತಿಗೆ
ಮಲ್ಗುದುತಾ
ಕೊಟ್ಟೆ ಕಣ್ಣ್ ಬುಟ್ಟ್‌ಕಂಡ್ ಗೂಡೆನ ನೋಡ್ತಿತ್ ಪಾಪು
ನುಂಗಿ ಬುಡುವಂಗೆ
ಕ್ಷಮ್ಸಕು ಮುಂದೆ ಬರಿಯಕೆ ಬೊತ್ತದೆ ನಾಚಿಕೆ ಆದೆ ನಂಗೆ
ಹಾಂಗೂ ಹೀಂಗೂ ಕಳ್ತ್ ಮದುವೆ ಭಾರೀ ಗೌಜಿಲಿ
ಇಂತ ಮದುವೆ ಎಲ್ಲೂ ನೋಡ್ತ್‌ಲೆ ನಾ ನನ್ನ ಜೀವಮಾನಲಿ

**ಕಾನೆಹಿತ್ಲು ಕೆ. ಜಯಪ್ರಕಾಶ್**
ಸೋಮವಾರಪೇಟೆ

## ಶಾಂತಿನ ನೋಡಿಕೆ ಬಂದವೆ ಗಡ

ಶಾಂತಿನ ನೋಡಿಕೆ ಬಂದವೇ ಗಡ
ಭಾರಿ ಮುನುಷ್ಯ ಬಂದದೆ ಗಡ
ಉದ್ದ ಕಾರ್‌ಲಿ ಬಂದದೆ ಗಡ
ಕಾರ್ ಮಾತ್ರ ಬಾಡಿಗೆ ಗಡ ||

ಹೈದ ಬೆಳ್ಳಗೆ ಉಟ್ಟ್ ಗಡ
ಭಾರಿ ಲಾಯಕ್ ಕಂಡದೆ ಗಡ
ಮಾತ್ ಬಹಳ ಕಮ್ಮಿ ಗಡ
ಎತ್ತರ ಮಾತ್ರ ಮೂರೇ ಅಡಿ ಗಡ

ಎಂ.ಎ. ಗಂಟ ಓದಿಟ್ಟ್ ಗಡ
ಭಾರಿ ಡಿಗ್ರಿ ಪಡ್ದುಟ್ಟ್ ಗಡ
ಪರದೇಶ ಎಲ್ಲಾ ಸುತ್ತಿಟ್ಟ್ ಗಡ
ಇಂಗ್ಲೀಷ್ ಮಾತ್ರ ಬಾದುಲೇ ಗಡ

ಲಕ್ಷದ ಮನೆ ಕಟ್ಟಿಟ್ಟ್ ಗಡ
ಭಾರಿ ದೊಡ್ಡ ಬಂಗಲೆ ಗಡ
ಎಲ್ಲಾ ಸಿಮೆಂಟ್ ಕೆಲಸಗಡ
ಮಹಡಿ ಮಾತ್ರ ಸೋರ್ದೆ ಗಡ

ತುಂಬಾ ಹಸು ಸಾಕಿಯೊಳ ಗಡ
ತುಂಬಾ ಹಾಲ್ ಕರವವೇ ಗಡ
ಯಾಗಳು ಹಾಲ್ ಮಾರುವೇ ಗಡ
ಕುಡಿಯಕ್ಕೆ ಮಾತ್ರ ಪೌಡರ್ ಗಡ

ಎಲ್ಲಾ ಸಭೆಗೆ ಹೋದವೆ ಗಡ
ತುಂಬಾ ಭಾಷಣ ಮಾಡಿವೆ ಗಡ
ಜೋಬ್‌ಲಿ ಯಾಗೊಳು ಪೆನ್ನ್ ಗಡ
ಸೈನ್ ಮಾತ್ರ ಹೆಬ್ಬೆಟ್ಟ್ ಗಡ

ಭಾರಿ ಮೇಕಪ್ ಮಾಡವೇ ಗಡ
ಪೌಡರ್ ಸ್ನೋ ಹಾಕಿವೆ ಗಡ
ಯಾಗೊಳು ಹೊಸ ಸೂಟು ಗಡ
ಬಾಡಿಗೆ ಅಂಗಡಿಲಿ ಸಾಲಗಡ ||ಶಾಂತಿ||

**ಪೈಕೇರ ಇಂದಿರಾ ತಮ್ಮಯ್ಯ**
ಬಿಳಿಗೇರಿ

**ಜನಾಂಗದವರ ಅಭ್ಯುದಯಕ್ಕೆ ನಿಶಾ ಸೇವನೆಯನ್ನು ಆದಷ್ಟು ಕಮ್ಮಿಮಾಡಿ**

**–ಪಟ್ಟಡ ಪ್ರಭಾಕರ**

ಸುರೂಗೆ ನಮ್ಮ ಅರೆಭಾಷೆ ಗೌಡರ ಸಾಂಸ್ಕೃತಿಕ ಸಮಾರಂಭ ಮೈಸೂರಿನ ಕಲಾಮಂದಿರಲಿ 12–4–98ಕ್ಕೆ ಜರ್‌ಗಿತ್. ಇದ್ಕೆ ನಮ್ಮೆಲ್ಲರ ಹೃತ್ಪೂರ್ವಕ ಅಭಿನಂದನೆಗ. ಮತ್ತೆ ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ ಮುಂದೆ ಇಡೀ ಭರತ ಖಂಡಲಿ ಸ ನಮ್ಮ ಅರೆಭಾಷೆ ಗೌಡರಿಗೆ ದಾರಿದೀಪ ಆಗಿ ಬೆಳಗೊಕುತ ಕುಲದೇವರ್ಲ್ಲಿ ಬೇಡಿಕಂಡವೆ.



ಯಿಂದ :

ಕೋಳಿಬೈಲು ನಾಣಯ್ಯ [ಭಾರತದ ದೂರವಾಣಿ ಕಾರ್ಖಾನೆ]

ಪಾರ್ವತಿ ನಾಣಯ್ಯ [ಭಾರತದ ಎಲೆಕ್ಟ್ರೋನಿಕ್ಸ್‌ಲಿಮಿಟೆಡ್]

ಮಕ್ಕಳಾದ: ಗಿರೀಶ್‌ಕುಮಾರ್ (ಬಿ.ಇ.) ಬೀನಾಕುಮಾರಿ [ಬಿ. ಕಾಂ] ಮತ್ತೆ ಕೃತಿಕಾ

ವಿಳಾಸ : M.S.R. Nagar, ಮತ್ತಿಕೆರೆ ಬೆಂಗಳೂರು – 560 054

ದೂರವಾಣಿ : 080/3349731

---



ದಿನಾಂಕ **12-4-1998**ರ ಭಾನುವಾರ ಮೈಸೂರಿನ ಕಲಾ ಮಂದಿರದಲ್ಲಿ ನಡೆದ
ಅದ್ದೂರಿಯ ಚರಿತ್ರಾರ್ಹ ಅರೆಭಾಷಿಕ ಸಾಂಸ್ಕೃತಿಕ ಕಾರ್ಯಕ್ರಮದ ಪಕ್ಷಿನೋಟ

Printed by M.K. Thammaiah and Published by Kodagu Sangathi on behalf of Pattada P. Sheelamani and Printed at ASHIRWAD PRINTERS, 180/A, 6th Main, Vinayakanagar, Mysore - 12. Published at Mysore, Editor PATTADA P. SHEELAMANI, No. 35, Ist Cross, 4th Block ( Near Divisional Telephone Office), Jayalakshmipuram, Mysore - 570 012 ✆ 516771